# ಡಾ. ಎಸ್. ಎಲ್. ಭೈರಪ್ಪ

ಡಾ. ವಿಠಲರಾವ್ ಗಾಯಕ್ವಾಡ್




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ತಿಳುವಳಿಕೆಯನ್ನು ಸಂಗ್ರಹಿಸಿ ತಿರುಗಿ ಲೋಕಕ್ಕೇ ದಾನ ಮಾಡುವ ಪ್ರಕ್ರಿಯೆ ಪ್ರಸಾರಾಂಗದಲ್ಲಿ ನಡೆಯುತ್ತಿದೆ. ಸಂಗ್ರಹವಾದ ತಿಳುವಳಿಕೆಗೆ ಗ್ರಂಥಗಳ ರೂಪವನ್ನು ಕೊಡುವ ಹೊಣೆಗಾರಿಕೆ ಪ್ರಸಾರಾಂಗದ್ದಾಗಿದೆ. ಈ ರೂಪಾಂತರದ ಪ್ರಕ್ರಿಯೆ ನಮ್ಮ ವಿಶ್ವವಿದ್ಯಾಲಯದ ವೈಶಿಷ್ಟ್ಯವಾಗಿದೆ.

ನಾವು ನಮ್ಮನಮ್ಮಲ್ಲಿ ವಿಚಾರ ವಿನಿಮಯ ನಡೆಸಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪ ಎಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕವಾಗುವವೆಂಬ ನಂಬಿಕೆಯಿಂದ ಪುಸ್ತಿಕೆಗಳ ರೂಪದಲ್ಲಿ ಅವನ್ನು ಪ್ರಕಟಿಸಿ ನಿಮ್ಮ ಕೈಗಿಡುತ್ತಿದ್ದೇವೆ.

**ಚಂದ್ರಶೇಖರ ಕಂಬಾರ**

**ಕುಲಪತಿಗಳು**

# ಪರಿವಿಡಿ

**Dr. S. L. Bhairappa** : By Dr. Vittal Rao Gaikwad published by Dr. Karigowda Beechanahalli, Director, Prasaranga, Kannada University Hampi, Vidyaranya, Kamalapura - 583 221, Pages viii + 52 Rs. 10/-

First Edition 1995

ನಮ್ಮಮು ಪುಸ್ತಕ ಮಾಲೆ – ೧೩



ಮುಖಪುಟ ವಿನ್ಯಾಸ : ಕೆ. ಮಕಾಳಿ

ಪ್ರಕಾಶಕರು
ಡಾ. ಕರೀಗೌಡ ಬೀಚನಹಳ್ಳಿ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಕಮಲಾಪುರ – ೫೮೩ ೨೨೧

ಬೆಲೆ : ಹತ್ತು ರೂಪಾಯಿಗಳು

ಮುದ್ರಕರು
ಸತ್ಯಶ್ರೀ ಪ್ರಿಂಟರ್ಸ್ ಪ್ರೈ. ಲಿ.
ಚಾಮರಾಜಪೇಟೆ , ಬೆಂಗಳೂರು – ೫೬೦ ೦೧೮
ಫೋನ್ : ೬೨೫೭೩೬

# ನಿವ್ಮೊಡನೆ

ಹಂಪಿ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು, ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ಒಂದು ದೃಷ್ಟಿಯಿಂದ ಇದು ವಿದ್ಯೆಯನ್ನು ನಿರ್ಮಿಸುವ ಸಂಸ್ಥೆಯಾಗಿದೆ. ನಮ್ಮ ದೇಶದಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ. ಅಲ್ಲದೇ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ, ಬೆಳಕನ್ನು ಉಂಟು ಮಾಡಿವೆ, ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ. ಈ ಬಗೆಯ ಶಾಸ್ತ್ರ–ಕಲೆ, ಅಭಿಜಾತ–ಜಾನಪದ, ಮಾರ್ಗ–ದೇಸಿ, ಸ್ವಕೀಯ–ಪರಕೀಯ, ಪೌರ್ವಾತ್ಯ–ಪಾಶ್ಚಾತ್ಯ ಈ ಬಗೆ ದ್ವಂದ್ವಗಳ ಸಾಮರಸ್ಯ ಮತ್ತು ಸಂಘರ್ಷಗಳ ಒಡಲಿನಲ್ಲಿ ಹುಟ್ಟಿಬರುವ ತಿಳುವಳಿಕೆಯನ್ನು ಹಿಡಿದುಕೊಂಡು ಕನ್ನಡದಲ್ಲಿ ಅದಕ್ಕೆ ಅಭಿವ್ಯಕ್ತಿಯನ್ನು ಕೊಡಬೇಕಾಗಿದೆ. ಭಾಷೆಯಲ್ಲಿ ಮೂಡಿ ಬರುವ ತಿಳುವಳಿಕೆ ಮಾತ್ರ ಉಪಯುಕ್ತವಾಗಬಲ್ಲದು. ಅನುವಾದ, ಭಾಷಾಂತರ, ವಿವರಣ, ಟೀಕೆ, ವಿಮರ್ಶೆ ಇಂಥ ವಿಧಾನಗಳನ್ನು ಅನುಸರಿಸುತ್ತ ತಿಳುವಳಿಕೆಯ ಹೊಸ ಸಾಹಿತ್ಯ ನಿರ್ಮಾಣವಾಗಬೇಕು. ಅಂಥ ಎಲ್ಲ ಬಗೆಯ ಸಂಶೋಧನಕ್ಕೂ ಕನ್ನಡ ವಿಶ್ವವಿದ್ಯಾಲಯದಲ್ಲಿ ಅನುಕೂಲವಿದೆ, ಅವಕಾಶವೂ ಇದೆ.

ಹೀಗೆ ಮೂಡಿ ಬಂದ ಸಾಹಿತ್ಯ ಪ್ರಕಟವಾಗಬೇಕು. ನಮ್ಮ ವಿಶ್ವವಿದ್ಯಾಲಯದ ಪ್ರಸಾರಾಂಗಕ್ಕೆ ಇಂಥ ಗುರುತರವಾದ ಜವಾಬ್ದಾರಿಯಿದೆ. ವಿದ್ಯೆಯ ಸೃಷ್ಟಿಯಾಗುವುದು ಈ ಪ್ರಸಾರಾಂಗದಲ್ಲಿ. ನಾಡಿನ ತಜ್ಞರಿಂದ ಗ್ರಂಥಗಳನ್ನು ಬರೆಯಿಸಿ ಪ್ರಕಟಿಸುವುದರ ಜೊತೆಗೆ, ವಿಶ್ವವಿದ್ಯಾಲಯ ಸೃಷ್ಟಿಸುತ್ತಿರುವ ಸಾಹಿತ್ಯವನ್ನೂ ಅದು ಪ್ರಕಟಿಸಬೇಕು. ಇದು ತಿಳುವಳಿಕೆಗೆ ಪರಿಪ್ರೇಕ್ಷ್ಯವನ್ನು ಕಟ್ಟುವ ಕೆಲಸ. ನಾಡಿನ ಪ್ರಕೃತಿಯಂತೆ ನಾಡಿನ ಸಂಸ್ಕೃತಿ ಕೂಡ ಈ ಪರಿಪ್ರೇಕ್ಷ್ಯವಿಲ್ಲದೆ ತನ್ನ ಅರ್ಥವನ್ನು ಕಳೆದುಕೊಳ್ಳುತ್ತಿದೆ. ಕಲ್ಲಿನಲ್ಲಿರುವ ಶಾಸನಗಳನ್ನು ಕಣ್ಣೆತ್ತಿ ನೋಡದ ಜನ ಅದೇ ಪುಸ್ತಕದಲ್ಲಿ ಪ್ರಕಟಗೊಂಡರೆ ಓದುತ್ತಾರೆ, ಅರ್ಥ ಮಾಡಿಕೊಳ್ಳುತ್ತಾರೆ. ಜನರಾಡುವ ಶಬ್ದಗಳನ್ನೇ ಕೋಶದಲ್ಲಿ ಸಂಗ್ರಹಿಸಿದರೆ ಆ ಶಬ್ದಗಳಿಗೆ ತಿಳುವಳಿಕೆಯ ಬೆಲೆ ಬರುತ್ತದೆ.

ನಮ್ಮ ಪ್ರಸಾರಾಂಗ, ಈಗಾಗಲೇ ಕೆಲವು ಪುಸ್ತಕಗಳನ್ನು ಪ್ರಕಟಿಸಿದೆ. ಪ್ರಸಾರಾಂಗ, ತನ್ನ ಪ್ರಕಟಣೆಗಳ ಮೂಲಕ ಸಾರ್ಥಕವಾಗಬೇಕಾದ ದಾರಿಯನ್ನು ಹುಡುಕಿಕೊಳ್ಳುತ್ತಿದೆ. ಲೋಕದಲ್ಲಿಯ

ತಿಳುವಳಿಕೆಯನ್ನು ಸಂಗ್ರಹಿಸಿ ತಿರುಗಿ ಲೋಕಕ್ಕೇ ದಾನ ಮಾಡುವ ಪ್ರಕ್ರಿಯೆ ಪ್ರಸಾರಾಂಗದಲ್ಲಿ ನಡೆಯುತ್ತಿದೆ. ಸಂಗ್ರಹವಾದ ತಿಳುವಳಿಕೆಗೆ ಗ್ರಂಥಗಳ ರೂಪವನ್ನು ಕೊಡುವ ಹೊಣೆಗಾರಿಕೆ ಪ್ರಸಾರಾಂಗದ್ದಾಗಿದೆ. ಈ ರೂಪಾಂತರದ ಪ್ರಕ್ರಿಯೆ ನಮ್ಮ ವಿಶ್ವವಿದ್ಯಾಲಯದ ವೈಶಿಷ್ಟ್ಯವಾಗಿದೆ.

ನಾವು ನಮ್ಮನಮ್ಮಲ್ಲಿ ವಿಚಾರ ವಿನಿಮಯ ನಡೆಸಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪ ಎಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕವಾಗುವವೆಂಬ ನಂಬಿಕೆಯಿಂದ ಪುಸ್ತಿಕೆಗಳ ರೂಪದಲ್ಲಿ ಅವನ್ನು ಪ್ರಕಟಿಸಿ ನಿಮ್ಮ ಕೈಗಿಡುತ್ತಿದ್ದೇವೆ.

ಚಂದ್ರಶೇಖರ ಕಂಬಾರ
ಕುಲಪತಿಗಳು

# ಪರಿವಿಡಿ

# ಡಾ. ಎಸ್. ಎಲ್. ಭೈರಪ್ಪ

ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ಕಳೆದ ಮೂರು ದಶಕಗಳಿಂದ ಭೈರಪ್ಪನವರ ಹೆಸರು ಮುಖ್ಯವಾಗಿದೆ. ಯಾವ ಪಂಥಕ್ಕೂ ಸೀಮಿತವಾಗದೆ ತಮ್ಮದೇ ಆದ ದೃಷ್ಟಿಕೋನದಿಂದ ಕಾದಂಬರಿಗಳನ್ನು ರಚಿಸುವ ಭೈರಪ್ಪನವರು ಹಲವು ಬಗೆಯ ವಿಮರ್ಶೆಗೆ ಒಳಗಾಗಿದ್ದಾರೆ.

ಭೈರಪ್ಪನವರು ೨೬–೦೭–೧೯೩೪ ರಂದು ಜನಿಸಿದರು. ಇವರ ಹುಟ್ಟೂರು ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲೂಕಿನ ಸಂತೇಶಿವರ ಗ್ರಾಮ. ಲಿಂಗಣ್ಣ ಮತ್ತು ಗೌರಮ್ಮ ಅವರ ತಂದೆ–ತಾಯಿಗಳು. ಅವರು ಸಂತೇಶಿವರ ಮತ್ತು ಅದರ ಹತ್ತಿರದ ಊರುಗಳಲ್ಲಿ ತಮ್ಮ ಪ್ರಾಥಮಿಕ ವಿದ್ಯಾಭ್ಯಾಸವನ್ನು ಮುಗಿಸಿದರು. ತುಂಬ ಕಡುಕಷ್ಟ ಹಾಗೂ ನೋವಿನಲ್ಲಿಯೇ ತಮ್ಮ ಬಾಲ್ಯವನ್ನು ಕಳೆದರು. ಅವರು ಹನ್ನೊಂದು ವರ್ಷದವರಾಗಿದ್ದಾಗ ಅವರ ತಾಯಿ (೧೯೪೫) ತೀರಿಕೊಂಡರು. ಹದಿಮೂರನೆಯ ವಯಸ್ಸಿನಲ್ಲಿಯೇ ಗಾಂಧೀಜಿಯವರ ಕರೆಯಂತೆ ಸ್ವಾತಂತ್ರ್ಯ ಚಳವಳಿಗೆ ಸೇರಿಕೊಂಡರು. ಬ್ರಿಟಿಷ್ ಸರಕಾರದ ವಿರುದ್ಧ ಭಾಷಣ ಮಾಡಿ, ಹೆಂಡದ ಲಾರಿಗಳನ್ನು ತಡೆದ ಆಪಾದನೆಯ ಮೇಲೆ ಅವರನ್ನು ಜೈಲಿಗೆ ಹಾಕಲಾಯಿತು. ಭೈರಪ್ಪನವರು ಇಂದಿಗೂ ಶುದ್ಧ ಮೌಲ್ಯಗಳ ದೃಷ್ಟಿಯಲ್ಲಿ ಮಹಾತ್ಮ ಗಾಂಧಿಯವರನ್ನು ಮಾತ್ರ ಮಹೋನ್ನತ ನಾಯಕರೆಂದು ಒಪ್ಪಿಕೊಂಡಿದ್ದಾರೆ. ಹಾಗೆಯೇ ಜಯಪ್ರಕಾಶನಾರಾಯಣರ ಆತ್ಮಾನ್ವೇಷಣಾ ತತ್ತ್ವಗಳ ಬಗ್ಗೆಯೂ ಅವರಿಗೆ ಒಲವಿರುವುದು ಅವರ ಕೃತಿಗಳಿಂದ ತಿಳಿದುಬರುತ್ತದೆ.

ತಮ್ಮ ಪ್ರಾಥಮಿಕ ಶಿಕ್ಷಣ ಮುಗಿದ ಮೇಲೆ ಮೈಸೂರಿಗೆ ಬಂದ ಅವರು ಶಾರದಾವಿಲಾಸ ಪ್ರೌಢಶಾಲೆಯಲ್ಲಿ ಸೇರಿಕೊಂಡರು. ೧೯೫೨ರಲ್ಲಿ ಎಸ್.ಎಸ್.ಎಲ್.ಸಿ ಮುಗಿಸಿದ ಅವರು ಮಹಾರಾಜ ಕಾಲೇಜು ಸೇರಿ ೧೯೫೪ರಲ್ಲಿ ಇಂಟರ್‌ಮೀಡಿಯಟ್‌ನಲ್ಲಿ ಉತ್ತೀರ್ಣರಾದರು. ಹಾಗೆಯೇ ೧೯೫೭ರಲ್ಲಿ ಬಿ.ಎ. (ಆನರ್ಸ್) ಪದವಿ ಪಡೆದ ಅವರು ತತ್ತ್ವಶಾಸ್ತ್ರ ವಿಷಯವನ್ನು ಆರಿಸಿಕೊಂಡು ಎಂ.ಎ ತರಗತಿಗೆ ಸೇರಿದರು. ೧೯೫೮ರಲ್ಲಿ ಅವರು ಪ್ರಥಮ ರ್‍ಯಾಂಕ್ ಮತ್ತು ಎರಡು ಚಿನ್ನದ ಪದಕಗಳನ್ನು ಗಳಿಸುವ ಮೂಲಕ ಎಂ.ಎ. ಪದವಿಯನ್ನು ಪಡೆದರು.

ಅನಂತರ ಅವರು ಅಧ್ಯಾಪಕರಾಗಿ, ಬೇರೆ ಬೇರೆ ಕಡೆಗಳಲ್ಲಿ ಸೇವೆ ಸಲ್ಲಿಸಿದರು. ಮೊದಲು ೧೯೫೮ ರಿಂದ ೧೯೬೦ರ ವರೆಗೆ ಹುಬ್ಬಳ್ಳಿಯ ಕಾಡಸಿದ್ದೇಶ್ವರ ಕಾಲೇಜಿನಲ್ಲಿ ತತ್ತ್ವಶಾಸ್ತ್ರ ಮತ್ತು ಮನಶ್ಶಾಸ್ತ್ರದ ಅಧ್ಯಾಪಕರಾಗಿ ಕೆಲಸಮಾಡಿದರು. ಅಲ್ಲಿಂದ ಗುಜರಾತಿನ ಸರ್ದಾರ್ ಪಟೇಲ್ ವಿಶ್ವವಿದ್ಯಾಲಯದಲ್ಲಿ ತತ್ತ್ವಶಾಸ್ತ್ರದ ಉಪನ್ಯಾಸಕರಾಗಿ ೧೯೬೦ ರಿಂದ ೧೯೬೬ರ ವರೆಗೆ ಕಾರ್ಯನಿರ್ವಹಿಸಿದರು. ಜೊತೆಗೆ ಅಲ್ಲಿರುವಾಗಲೇ ಬರೋಡಾದ ಮಹಾರಾಜ ಸಯ್ಯಾಜಿರಾವ್

ವಿಶ್ವವಿದ್ಯಾಲಯಕ್ಕೆ ಬರೆದು ಒಪ್ಪಿಸಿದ 'ಸತ್ಯ ಮತ್ತು ಸೌಂದರ್ಯ' ಎಂಬ ಮಹಾಪ್ರಬಂಧಕ್ಕೆ ೧೯೬೨ ರಲ್ಲಿ ಪಿಎಚ್.ಡಿ. ಪದವಿಯು ಲಭಿಸಿತು. ಅನಂತರ ಅವರು ೧೯೬೭ ರಿಂದ ೧೯೭೧ರ ವರೆಗೆ ನಾಲ್ಕು ವರ್ಷಗಳ ಕಾಲ ದೆಹಲಿಯ ರಾಷ್ಟ್ರೀಯ ಶಿಕ್ಷಣ ಮತ್ತು ತರಬೇತಿ ಸಂಸ್ಥೆಯಲ್ಲಿ ಶಿಕ್ಷಣ ಮೀಮಾಂಸೆಯ ಉಪಪ್ರಾಧ್ಯಾಪಕರಾಗಿದ್ದರು. ಕೊನೆಗೆ ೧೯೭೧ ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ವ್ಯಾಪ್ತಿಗೆ ಬರುವ ಪ್ರಾದೇಶಿಕ ಶಿಕ್ಷಣ ಕಾಲೇಜಿಗೆ ಪ್ರಾಧ್ಯಾಪಕರಾಗಿ ಬಂದ ಅವರು ೧೯೯೧ರವರೆಗೆ ೨೦ ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಈಗ ನಿವೃತ್ತರಾಗಿ ವಿಶ್ರಾಂತ ಜೀವನ ನಡೆಸುತ್ತಿದ್ದಾರೆ.

೧೯೫೮ ರಲ್ಲಿ ಸರಸ್ವತಿ ಎಂಬುವರನ್ನು ವಿವಾಹವಾದರು. ಇವರಿಗೆ ರವಿಶಂಕರ್ (೧೯೬೦) ಮತ್ತು ಉದಯಶಂಕರ್ (೧೯೬೨) ಎಂಬ ಇಬ್ಬರು ಪುತ್ರರಿದ್ದಾರೆ.

ಬೈರಪ್ಪನವರು ತಮ್ಮ ವಿದ್ಯಾರ್ಥಿ ದೆಶೆಯಿಂದಲೇ ಸಾಹಿತ್ಯ ರಚನೆಯನ್ನು ಮಾಡುತ್ತಿದ್ದರು. ಮೊದಲು ತಮ್ಮ ವಿದ್ಯಾರ್ಥಿನಿಲಯದ ಸ್ಮರಣ ಸಂಚಿಕೆಗೆ ಕಥೆಗಳನ್ನು ಬರೆಯುವುದರ ಮೂಲಕ ಸಾಹಿತ್ಯ ರಚನೆ ಆರಂಭಿಸಿದರು. ಅನಂತರ ಇಂಟರ್‌ಮೀಡಿಯಟ್ ಓದುವಾಗ 'ಗತಜನ್ಮ' ಎಂಬ ನೀಳ್ಗತೆಯನ್ನು ಹಾಗೂ 'ಭೀಮಕಾಯ', 'ಬೆಳಕು ಮೂಡಿತು' ಎಂಬ ಕಾದಂಬರಿಗಳನ್ನು ಬರೆದರು. ಆ ಕಾಲದ ಪ್ರಮುಖ ಲೇಖಕರಾದ ಅ. ನ. ಕೃಷ್ಣರಾಯರಿಂದ ತಾವು ಪ್ರಭಾವಿತರಾದುದಾಗಿ ಅವರು ಹೇಳಿಕೊಂಡಿದ್ದಾರೆ. 'ಭೀಮಕಾಯ' ಇತ್ತೀಚೆಗೆ 'ತರಂಗ' ವಾರಪತ್ರಿಕೆಯಲ್ಲಿ ಧಾರವಾಹಿಯಾಗಿ ಪ್ರಕಟಗೊಂಡಿತು. ಬೈರಪ್ಪನವರು 'ಧರ್ಮಶ್ರೀ' ಕಾದಂಬರಿಯಿಂದ ತಮ್ಮ ನಿಜವಾದ ಸಾಹಿತ್ಯ ಕೃಷಿ ಆರಂಭಿಸಿದರು. ಎಲ್ಲಾ ಪ್ರಭಾವಗಳಿಂದ ಮುಕ್ತರಾಗಿ ತಮ್ಮದೇ ಮಾರ್ಗದ ಮೂಲಕ 'ಧರ್ಮಶ್ರೀ' ಯನ್ನು ೧೯೬೧ ರಲ್ಲಿ ಪ್ರಕಟಿಸಿದರು. ಅಲ್ಲಿಂದ 'ತಂತು'ವಿನ ವರೆಗೆ ಅವರು ಒಟ್ಟು ಹದಿನೇಳು ಕಾದಂಬರಿಗಳನ್ನು ಪ್ರಕಟಿಸಿದ್ದಾರೆ. ಜೊತೆಗೆ ಸಾಹಿತ್ಯ ಚರ್ಚೆ ಮತ್ತು ಸೌಂದರ್ಯ ಮೀಮಾಂಸೆಗೆ ಸಂಬಂಧಿಸಿದಂತೆ ನಾಲ್ಕು ಕೃತಿಗಳನ್ನು ರಚಿಸಿದ್ದಾರೆ. ಅಲ್ಲದೆ ವಿವಿಧ ವಿಷಯಗಳನ್ನು ಕುರಿತಂತೆ ಇಂಗ್ಲಿಷಿನಲ್ಲಿ ಇಪ್ಪತ್ತಕ್ಕೂ ಹೆಚ್ಚು ಲೇಖನಗಳನ್ನು ಬರೆದಿದ್ದಾರೆ. 'ವಿದ್ಯಾಭ್ಯಾಸದಲ್ಲಿ ಸಮಾನಾವಕಾಶ', 'ಭಾರತೀಯ ಶಿಕ್ಷಣದಲ್ಲಿ ಮೌಲ್ಯಗಳ ಸ್ಥಾನ ಮತ್ತು ವ್ಯಕ್ತಿತ್ವ', 'ಚಾರಿತ್ರಿಕ ವಿಕಾಸದಲ್ಲಿ ತತ್ತ್ವಶಾಸ್ತ್ರ' ಎಂಬ ಕೃತಿಗಳನ್ನೂ ಕೂಡ ರಚಿಸಿದ್ದಾರೆ. ಭಾರತೀಯ ತತ್ತ್ವಶಾಸ್ತ್ರ ಮತ್ತು ಮನಶ್ಯಾಸ್ತ್ರವನ್ನು ಆಳವಾಗಿ ಅಭ್ಯಾಸ ಮಾಡಿರುವ ಅವರಿಗೆ 'ಭಾರತೀಯ ಸಂಸ್ಕೃತಿ' ಯ ಬಗ್ಗೆ ತೀವ್ರಕಾಳಜಿ ಇದೆ. ಹಿಂದೂಸ್ಥಾನಿ ಸಂಗೀತದಲ್ಲಿಯೂ ತುಂಬಾ ಆಸಕ್ತರಾದ ಅವರು ಸಂಗೀತವನ್ನು 'ಜೀವಧ್ವನಿ'ಯಾಗಿ ಗ್ರಹಿಸಿದ್ದಾರೆ. ಆದ್ದರಿಂದ ಅವರ ಅನೇಕ ಕೃತಿಗಳಲ್ಲಿ ಸಂಗೀತವು ವ್ಯಕ್ತಿ ಬದುಕಿನ ಮುಖ್ಯ ಅಂಶವಾಗಿದೆ. ಈ ಹಿನ್ನೆಲೆಯಲ್ಲಿ 'ಗಂಗೂಬಾಯಿ ಹಾನಗಲ್' ಎಂಬ ಗ್ರಂಥವನ್ನು ಕೂಡ ಸಂಪಾದಿಸಿಕೊಟ್ಟಿದ್ದಾರೆ.

ಬೈರಪ್ಪನವರು ಮುಖ್ಯವಾಗಿ ಜಿಜ್ಞಾಸು ಪ್ರವೃತ್ತಿಯವರು. ಆ ಕಾರಣ ಅವರ ಕಾದಂಬರಿಗಳೆಲ್ಲವೂ ವಿಚಾರ ಪ್ರಧಾನವಾದುವಾಗಿವೆ. ಪ್ರತಿಯೊಂದು ಕಾದಂಬರಿಯೂ ತಾತ್ತ್ವಿಕ ಸಿದ್ಧಾಂತದಿಂದಲೇ ಆರಂಭವಾಗುತ್ತದೆ. ಭಾರತೀಯ ತತ್ತ್ವಶಾಸ್ತ್ರ ಮತ್ತು ಮನಶ್ಯಾಸ್ತ್ರವು ಇವರ ಎಲ್ಲ ಕೃತಿಗಳಿಗೆ

ಮೂಲ ತಳಹದಿಯಾಗಿವೆ. ಆ ಮೂಲಕ 'ಭಾರತೀಯ ಸಂಸ್ಕೃತಿ'ಯ ಬಗ್ಗೆ ಒಂದು ವಿಶಿಷ್ಟ 'ದೃಷ್ಟಿಕೋನ'ವನ್ನು ಬೆಳೆಸಿಕೊಂಡ ಇವರು ಆ ಮೂಲಕವೇ 'ಸಾಮಾಜಿಕ ಪರಿವರ್ತನೆ'ಯನ್ನು ಅಳೆಯುತ್ತಾರೆ. ತಮ್ಮ 'ನಾನೇಕೆ ಬರೆಯುತ್ತೇನೆ' ಎಂಬ ಕೃತಿಯಲ್ಲಿ ಹೇಳಿರುವ ವಿಚಾರಗಳು ಮುಖ್ಯವಾದುವು. ಜೀವನಾನುಭವ ಹೆಚ್ಚು ಸೂಕ್ಷ್ಮವಾದಂತೆ ಅವರ ದೃಷ್ಟಿ–ಧೋರಣೆಗಳೂ ಕೂಡ ಬದಲಾಗುತ್ತಾ ಹೋದುದನ್ನು ಅದರಲ್ಲಿ ಗುರುತಿಸುತ್ತಾರೆ :

೧. ಸಮಾಜದ ಓರೆಕೋರೆಗಳನ್ನು ಸಾಹಿತ್ಯದಲ್ಲಿ ಹೊರಹಾಕಿ ಆ ಮೂಲಕ ಸಮಾಜವನ್ನು ತಿದ್ದಬೇಕೆಂಬ ವಿಚಾರದ ಫಲವೇ 'ಧರ್ಮಶ್ರೀ'. ನಾಲ್ಕೈದು ವರ್ಷಗಳ ಅನಂತರ ಸಮಾಜದ ಗತಿ ಈ ಮೂಲಕ ಬದಲಾಗದು ಎಂಬುದನ್ನು ಅರಿತು ಸಾಹಿತ್ಯದ ಮೂಲಕ ಸಮಾಜವನ್ನು ತಿದ್ದುವುದು ಸಾಧ್ಯವೆಂಬ ಭಾವನೆ ಹುಚ್ಚುತನ ಎಂಬುದು ಸ್ಪಷ್ಟವಾಯಿತು.

೨. ಸಾಮಾಜಿಕ ಪರಿವರ್ತನೆಗೆ ಆರ್ಥಿಕ, ಸಾಮಾಜಿಕ, ರಾಜಕೀಯ, ಧಾರ್ಮಿಕ, ಔದ್ಯೋಗಿಕ, ಶೈಕ್ಷಣಿಕ–ಇವೇ ಮೊದಲಾದ ಹತ್ತಾರು ಬೇರೆ ಬೇರೆ ವಿಚಾರಗಳು ಕಾರಣವಾಗುತ್ತವೆ. ಹೀಗೆ ಹಲವು ಮುಖಗಳಲ್ಲಿ ಆಗುವ ಬದಲಾವಣೆಗಳ ಪರಿಣಾಮವಾಗಿ ಮನುಷ್ಯ–ಮನುಷ್ಯನ ನಡುವಿನ ಸಂಬಂಧದ ಪರಿವರ್ತನೆಯಾಗುತ್ತದೆಂಬ ಅರಿವು ಮೂಡಿತು.

೩. ನಂಬಿಕೆ, ಆಚಾರ–ವಿಚಾರಗಳ ಒಂದು ಯುಗವು ಕಳೆದು ಮತ್ತೊಂದು ಯುಗವು ಆರಂಭವಾಗುವ ಸ್ಥಿತ್ಯಂತರ ಕಾಲದಲ್ಲಿ ಬದುಕುವ ವ್ಯಕ್ತಿಗಳ ನೋವು, ಘರ್ಷಣೆ ಮೊದಲಾದುವನ್ನು ಚಿತ್ರಿಸುವುದೇ ಸಾಹಿತ್ಯದ ಮುಖ್ಯಗುರಿಯಾಗಬೇಕು.

೪. ಸ್ಥಿತ್ಯಂತರ ಕಾಲದ ಯಾವ ಹೊರೆಯೂ ಇಲ್ಲದೆ ಸಮಕಾಲೀನ ಜೀವನದ ಒಂದು ಮುಖವನ್ನು ವಾಸ್ತವಿಕವಾಗಿ ಚಿತ್ರಿಸುವುದು ಸಾಹಿತ್ಯದ ದೃಷ್ಟಿಕೋನವಾಗಬೇಕು.

೫. ಯಾವ ತತ್ತ್ವ, ಆದರ್ಶಗಳನ್ನೂ ಸಾಹಿತ್ಯ ಕೃತಿಯ ವಸ್ತುವಾಗಿಸಿಕೊಳ್ಳಬಾರದು. ಬದಲಾಗಿ ಜೀವನವನ್ನು ನೇರವಾಗಿ ನೋಡಿ ಅದರ ನಾಡಿಯ ಮಿಡಿತವನ್ನು ಸಾಹಿತ್ಯದಲ್ಲಿ ಮೂಡಿಸಬೇಕು.

ಈ ಐದು ಅಂಶಗಳು ಅವರ ಸಾಹಿತ್ಯ ರಚನೆಯ ಪ್ರಮುಖ ಘಟ್ಟಗಳಾಗಿವೆ. ನೇರವಾಗಿ ಜೀವನವನ್ನು ಗ್ರಹಿಸುವ ಬಗೆ ಮತ್ತು ಸತ್ಯಾನ್ವೇಷಣೆಯ ಸ್ವರೂಪವಾವುದೆಂಬುದರ ಬಗ್ಗೆ ಹೀಗೆ ಹೇಳುತ್ತಾರೆ. "ನನಗೆ ಆಸಕ್ತಿ ಇರುವುದು ಮನುಷ್ಯನ ಸ್ವಭಾವ, ಆಸೆ, ಆಕಾಂಕ್ಷೆ, ಉನ್ನತ–ನೀಚ ಪ್ರವೃತ್ತಿಗಳು ಮೊದಲಾದುವುಗಳನ್ನು ಅರಸಿ ಕಂಡುಕೊಳ್ಳಬೇಕಾದ ಸತ್ಯದಲ್ಲೇ ಹೊರತು ಬಾಹ್ಯ ಜಗತ್ತನ್ನು ಅಳೆಯುವ ಭೌತ, ಖಗೋಳ, ಭೌತಶಾಸ್ತ್ರದ ಸತ್ಯದಲ್ಲಲ್ಲ; ಮನುಷ್ಯ ಜೀವನದ ಆಚೆ ಮತ್ತು ಈಚೆಗಿನ ಪ್ರಶ್ನೆಗಳನ್ನು ಚಿಂತಿಸುವ ಮತಧರ್ಮದ ಸತ್ಯಗಳಲ್ಲೂ ಅಲ್ಲ; ಮನುಷ್ಯನನ್ನು ಅಧ್ಯಯನ ಮಾಡಿದರೂ ಅವನ ಗುಣ, ಸ್ವಭಾವ, ಪ್ರವೃತ್ತಿಗಳ ಸಾಮಾನ್ಯತೆಯನ್ನು ಅರಸುವ

ಸಮಾಜಶಾಸ್ತ್ರ, ಮನೋವಿಜ್ಞಾನ ಮೊದಲಾದುವುಗಳು ಪ್ರಯತ್ನಿಸುವ ಸತ್ಯದಲ್ಲೂ ಅಲ್ಲ; ಕಲ್ಪನೆಯ ಸೃಜನಶೀಲತೆ ಇಲ್ಲದೆ ಗತ ವಾಸ್ತವತೆಯನ್ನು ಹುಡುಕಿಕೊಂಡು ಅಲೆಯುವ ಇತಿಹಾಸದಲ್ಲಂತೂ ಅಲ್ಲವೇ ಅಲ್ಲ.... ನಾನೇ ಸ್ವತಃ ಅನ್ವೇಷಿಸುವ, ಅರಸುವ, ಆವಿಷ್ಕರಿಸಿಕೊಳ್ಳುವ ಸತ್ಯದಿಂದ ನನಗೆ ಹೆಚ್ಚು ತೃಪ್ತಿ ಸಿಕ್ಕುತ್ತದೆ, ನನ್ನ ಜೀವನಕ್ಕೆ ಅರ್ಥ ಸಿಕ್ಕುತ್ತದೆ'' (ನಾನೇಕೆ ಬರೆಯುತ್ತೇನೆ, ಪು–೩೪).

ಈ ದೃಷ್ಟಿಕೋನದಿಂದಾಗಿಯೇ ಅವರ ಪಾತ್ರಗಳೆಲ್ಲ ಸ್ವಾನುಭವ ಜೀವನವನ್ನು ರೂಪಿಸಿಕೊಳ್ಳುವುದರ ಕಡೆಗೆ ತುಡಿಯುತ್ತವೆ. ಗಾಂಧೀಜಿಯವರ ನಂತರ ರಾಜಕೀಯ ಮೌಲ್ಯಗಳು ಅಧೋಗತಿಯಾದುದರ ಬಗ್ಗೆ ಭೈರಪ್ಪನವರು ತೀವ್ರವಾಗಿ ವಿಷಾದಿಸುತ್ತಾರೆ. ಸ್ವತಂತ್ರ ಭಾರತದಲ್ಲಿ ಸರ್ವಸಮಾನತೆಗಾಗಿ ಸರ್ಕಾರವು ರೂಪಿಸುತ್ತಿರುವ ಕಾರ್ಯಕ್ರಮಗಳು ವಿರೂಪಗೊಂಡು ಜಾತೀಯತೆಯು ವಿಷ ಪ್ರಮಾಣದಲ್ಲಿ ಬೆಳೆಯುತ್ತಿರುವುದನ್ನು ಗುರುತಿಸುತ್ತಾರೆ. ಇದಕ್ಕೆಲ್ಲ ಮುಖ್ಯ ಕಾರಣ ಗಾಂಧಿಯುಗದಲ್ಲಿದ್ದ 'ಪ್ರಾಮಾಣಿಕತೆ' ಮತ್ತು 'ಸೇವಾ ಮನೋಭಾವ'ಗಳು ಇಂದು ಕಣ್ಮರೆಯಾಗುತ್ತಿರುವುದೇ ಆಗಿದೆ. ಆ ಕಾರಣ ಅವರು ತಮ್ಮ ಕೃತಿಗಳಲ್ಲಿ ಈ ಎರಡು ಅಂಶಗಳನ್ನು 'ಶ್ರೇಷ್ಠ ಮೌಲ್ಯ'ಗಳಾಗಿ ಪ್ರತಿಪಾದಿಸುತ್ತಾರೆ. ಬಿಳಿಕಾಲರುಗಳನ್ನು ಸೃಷ್ಟಿಸುತ್ತಿರುವ 'ವಿದ್ಯಾಭ್ಯಾಸ ಪದ್ಧತಿ' ಆಗತ್ಯವಾಗಿ ಬದಲಾಗಬೇಕೆಂಬುದು ಅವರ ಮುಖ್ಯ ನಿಲುವಾಗಿದೆ.

ಜೀವನಾನುಭವ ಗಾಢವಾದಷ್ಟೂ ಬದುಕು ಪರಿಪಾಕಗೊಳ್ಳುತ್ತದೆ. ಹುಟ್ಟು–ಬದುಕು–ಸಾವು ಇವು ಜೀವನದ ಪ್ರಮುಖ ಅಂಶಗಳಾಗಿ ಮನುಷ್ಯನನ್ನು ಕಾಡುವುದಿಲ್ಲ. ಆದ್ದರಿಂದಲೇ ಅವರು ಮನುಷ್ಯನಿಗೆ ಮುಖ್ಯ ಪ್ರಶ್ನೆಯಾಗಿರುವ 'ಸಾವು' ಕುರಿತು ತಮ್ಮ ಕೃತಿಗಳಲ್ಲಿ ಮತ್ತೆ ಮತ್ತೆ ಚರ್ಚಿಸುತ್ತಾರೆ : ''ಸಾವನ್ನು ಇಂದ್ರಿಯಮಟ್ಟದಲ್ಲಿ ಎದುರಿಸ ಹೊರಟಾಗ ಸಹಜವಾಗಿ ಭಯವಾಗುತ್ತದೆ. ಅದನ್ನು ಹೋಗಲಾಡಿಸಲು ಮನುಷ್ಯ ಇಂದ್ರಿಯಸುಖಗಳಲ್ಲಿ ಆಶ್ರಯ ಪಡೆಯುತ್ತಾನೆ.... ಆದರೆ ಸೃಜನಶೀಲ ಚಿಂತನೆಯಿಂದ ಸಾವನ್ನು ಎದುರಿಸುವಾಗ ಇಡೀ ಜೀವನವು ಹೊಸ ಬೆಳಕಿನಲ್ಲಿ ಎದ್ದು ನಿಲ್ಲುತ್ತದೆ. ಅದರಲ್ಲಿ ಸಾವನ್ನು ಕಾಣುವ ಹೊಳಹೂ ಕಾಣಬಹುದು. ಬುದ್ಧನು ಸಾವನ್ನು ಗೆದ್ದದ್ದು ಇಂತಹ ಹೊಳಹಿನಿಂದಲೇ. ಉಪನಿಷತ್ತುಗಳು ಸಾವೆಂಬುದೇ ಸುಳ್ಳು ಎಂಬಂತಹ ಪುರಾಣವನ್ನು ಸೃಷ್ಟಿಸಿದವು. ಇವೆಲ್ಲವೂ ಸೃಜನಶೀಲ ಮನಸ್ಸು ಸಾವನ್ನು ಎದುರಿಸಿದಾಗ ಹುಟ್ಟಿಕೊಂಡ ಫಲಗಳು. ನನ್ನ ಮಟ್ಟಿಗೆ ಹೇಳುವುದಾದರೆ ಸೃಜನಶೀಲತೆಯು ಅತ್ಯಂತ ಕ್ರಿಯಾತ್ಮಕ ಅವಸ್ಥೆಯಲ್ಲಿರುವಾಗ ಸಾವು ಅದರ ವಿಷಯವಾಗಿಬಿಡುತ್ತದೆ.... ಸಾವಿಗಿಂತ ಅದು ಪ್ರಚೋದಿಸುವ ಜೀವನಮೌಲ್ಯಗಳ ಸ್ವರೂಪ, ಜೀವ ಜೀವಗಳ ಸಂಬಂಧ ಚಿತ್ರವು ಅರ್ಥಪೂರ್ಣವಾಗುತ್ತದೆ. ಸೃಜನಶೀಲತೆಯು ದುರ್ಬಲವಾದಾಗ ಅಥವಾ ನಶಿಸಿ ಹೋದಾಗ ಸಾವು ವಿಷಯವಾಗಿ ದಕ್ಕದ ವಾಸ್ತವವಾಗುತ್ತದೆ'' (ಭೈರಪ್ಪಾಭಿನಂದನಾ : ಪು–೪೬).

ಸಾವಿನ ಪರಿಣಾಮ ಎಂಥದೆಂಬ ಅನುಭವ ಭೈರಪ್ಪನವರಿಗೆ ಬಾಲ್ಯದಲ್ಲಿಯೇ ಉಂಟಾಗಿತ್ತು. ಅವರ ಒಂಭತ್ತನೆಯ ವಯಸ್ಸಿನಲ್ಲಿ ಅಣ್ಣ ಮತ್ತು ಅಕ್ಕ ಒಂದೇ ದಿನ ಸಾವನ್ನಪ್ಪಿದ್ದರು. ಅನಂತರ

ಹನ್ನೊಂದನೆಯ ವಯಸ್ಸಿನಲ್ಲಿ ತಾಯಿಯ ಸಾವು ಘಟಿಸಿತು. ಹದಿನಾಲ್ಕನೆಯ ವಯಸ್ಸಿನಲ್ಲಿ ಅವರ ತಮ್ಮನೊಬ್ಬ ಸತ್ತಾಗ ಅವನ ಹೆಣವನ್ನು ಸ್ವತಃ ತಾವೇ ಶ್ಮಶಾನಕ್ಕೆ ಹೆಗಲ ಮೇಲೆ ಹೊತ್ತುಕೊಂಡು ಹೋಗಿದ್ದರು. ಈ ಎಲ್ಲ ಸಂದರ್ಭಗಳಲ್ಲಿ ಸಾವು ಅವರ ಮನಸ್ಸನ್ನು ಗಾಢವಾಗಿ ಕಲಕಿತ್ತು. ಚಿಕ್ಕ ವಯಸ್ಸಿನಲ್ಲಿಯೇ ಅವರು ಹುಟ್ಟು–ಸಾವಿನ ಬಗ್ಗೆ ತೀವ್ರವಾಗಿ ಯೋಚಿಸಲಾರಂಭಿಸಿದರು. ಅದರ ಮುಂದಿನ ಹೆಜ್ಜೆಯಾಗಿ ಸೃಜನಶೀಲ ಕೃತಿಗಳಲ್ಲಿ 'ಸಾವು' ಮತ್ತೊಬ್ಬರ ಜೀವನದ ಅರಿವು ಮತ್ತು ಶೋಧನೆಯ ವಿಚಾರವಾಗಿ ಮೂಡಿ ಬಂದಿದೆ. ಗಾಂಧೀಜಿಯವರ ಸಾಮಾಜಿಕ ಚಿಂತನೆಗಳಂತೆಯೇ, ಆನಂದ ಕುಮಾರಸ್ವಾಮಿಯವರ ಸಾಂಸ್ಕೃತಿಕ–ಆಧ್ಯಾತ್ಮಿಕ ಚಿಂತನೆಗಳು ಅವರ ಮೇಲೆ ಗಂಭೀರವಾಗಿ ಪ್ರಭಾವ ಬೀರಿವೆ. ಅವರ ಕೃತಿಗಳಲ್ಲಿ ವಿಚಾರ ಪ್ರಕ್ರಿಯೆ ರೂಪುಗೊಂಡಿರುವುದು ಈ ಮೂಲನೆಲೆಯಿಂದಲೇ ಎಂಬುದು ಸ್ಪಷ್ಟ

# ಕೃತಿಗಳ ಪರಿಚಯ

ಧರ್ಮಶ್ರೀ ಭೈರಪ್ಪನವರ ಮೊದಲ ಪ್ರಕಟಿತ ಕಾದಂಬರಿ. ಕಾಲೇಜು ವಿದ್ಯಾರ್ಥಿಗಳ ದೃಷ್ಟಿ-ಧೋರಣೆಗಳನ್ನು ಕುರಿತದ್ದು. ಎರಡು ಧರ್ಮಗಳ ವಿಚಾರಗಳು ಪರಸ್ಪರ ಎದುರಾಗಿ ಪ್ರೀತಿ-ಪ್ರೇಮದ ಹಿನ್ನೆಲೆಯಲ್ಲಿ ಮತಾಂತರಗೊಂಡರೂ, ಧರ್ಮದ ವಿಚಾರಗಳು ಮನುಷ್ಯ ಬದುಕನ್ನು ಹೇಗೆ ಒಂದು ನಿಷ್ಟಿನಿಂದ ಹಿಡಿದಿಡುತ್ತವೆ ಎಂಬ ವಿಷಯವೇ ಈ ಕಾದಂಬರಿಯ ವಸ್ತು. ಚಿಕ್ಕಂದಿನಿಂದಲೂ ತುಂಬಾ ಕಷ್ಟದಿಂದ ಓದುತ್ತಿದ್ದ ಸತ್ಯನಾರಾಯಣ ಮುಂದೆ ನಂಜುಂಡ ಮೇಷ್ಟರ ಆದೇಶದಂತೆ ನರಸಾಪುರಕ್ಕೆ ಬಂದು ಓದು ಮುಂದುವರೆಸುತ್ತಾನೆ. ಮೊದಲೇ ಚೂಟಿಯಾಗಿದ್ದ ಅವನು ಅವರ ಪ್ರೋತ್ಸಾಹದಿಂದ ಓದು, ಚರ್ಚಾಸ್ಪರ್ಧೆ ಮೊದಲಾದ ಎಲ್ಲದರಲ್ಲೂ ಮೊದಲ ಸ್ಥಾನಗಳಿಸುತ್ತಾನೆ. ಅನಂತರ ಕಾಲೇಜಿಗೆ ಸೇರುತ್ತಾನೆ. ಇದು ಅವನ ಬದುಕಿನ ಎರಡನೆಯ ಘಟ್ಟ ಮತ್ತು ಬದಲಾವಣೆಯ ಮಾರ್ಗವೂ ಹೌದು. ಕಾಲೇಜಿನಲ್ಲಿ ತನ್ನ ಸಹಪಾಠಿ ರಾಚಮ್ಮನ ಅಣ್ಣನ ಮಗಳು 'ಲಿಲ್ಲಿ' ಎಂಬ ಕ್ರಿಶ್ಚಿಯನ್ ಹುಡುಗಿಯ ಪರಿಚಯವಾಗುತ್ತದೆ. ಪರಿಚಯ ಪ್ರೇಮಕ್ಕೆ ತಿರುಗಿ ಸಾಂಪ್ರದಾಯಿಕ ಬ್ರಾಹ್ಮಣ ಧರ್ಮ ಮತ್ತು ಸಾಂಪ್ರಾದಾಯಿಕ ಕ್ರಿಶ್ಚಿಯನ್ ಧರ್ಮದ ವಿಚಾರಗಳು ಪರಸ್ಪರ ಮುಖಾಮುಖಿಯಾಗಲು ಕಾರಣವಾಗುತ್ತದೆ.

ಅನಾಥಾಲಯದಲ್ಲಿ ಊಟ ಮಾಡಿಕೊಂಡು, ಮಕ್ಕಳಿಗೆ ಪಾಠ ಹೇಳಿ ಮೇಲು ಖರ್ಚಿಗೆ ಹಣ ಒದಗಿಸಿಕೊಂಡು ಓದುತ್ತಿದ್ದವನು ಸತ್ಯನಾರಾಯಣ. ಅವನಿಗೆ 'ಭಾರತೀಯ ಸಂಸ್ಕೃತಿ'ಯ ಬಗ್ಗೆ ಅಪಾರ ಗೌರವ ಮತ್ತು ಅಭಿಮಾನ. ಆದರ ಉದಾಗವಾದಿ ಚಿಂತನೆಗಳ ಮೂಲಕ ಇತರೆ ಧರ್ಮಗಳನ್ನು ಖಂಡಿಸುತ್ತಿರುತ್ತಾನೆ. ಕ್ರಮೇಣ ಹಿಂದೂ ಧರ್ಮದಲ್ಲಿ ಬೇರೂರಿರುವ ಜಾತಿಪದ್ಧತಿಯ ಸ್ವರೂಪವನ್ನು ಅವನು ಕಾಣುತ್ತಾನೆ. ತಾವೇ ಮೇಲೆಂಬ ಭ್ರಮೆಯಿಂದ ಪರಸ್ಪರ ಒಬ್ಬರನ್ನೊಬ್ಬರು ದೂರುವ ಬ್ರಾಹ್ಮಣ-ಲಿಂಗಾಯತಾದಿ ಜಾತಿಗಳ ವಿಚಿತ್ರ ವಿಚಾರಗಳಿಂದ ಬೇಸರಗೊಂಡು ಆತ ಒಂದೇ ಸ್ವರೂಪವುಳ್ಳ ಕ್ರೈಸ್ತ ಧರ್ಮಕ್ಕೆ ಮತಾಂತರಗೊಳ್ಳುತ್ತಾನೆ. ಅದಕ್ಕೆ ಮತ್ತೊಂದು ಕಾರಣ ಲಿಲ್ಲಿಯನ್ನು ಮದುವೆಯಾಗುವುದೂ ಆಗಿರುತ್ತದೆ. ಮುಂದೆ ಕ್ರೈಸ್ತ ವಿದ್ಯಾಸಂಸ್ಥೆಯಲ್ಲಿ ಅಧ್ಯಾಪಕನಾಗುತ್ತಾನೆ. ಆದರೆ ಅಲ್ಲಿಂಯ ನಿರ್ಬಂಧಗಳು, ಹೊಸ ಅಂಶಗಳಿಗೆ ಹೊಂದಿಕೊಳ್ಳಲಾರದೆ ಲಿಲ್ಲಿಯೊಂದಿಗೆ ಹಿಂದೂ ಧರ್ಮಕ್ಕೆ ವಾಪಸ್ಸಾಗುತ್ತಾನೆ. ಆರ್ಯಸಮಾಜ ಅವನನ್ನು ಹಾಗೂ ಅವನ ಹೆಂಡತಿಯನ್ನು ಪರಿಶುದ್ಧಗೊಳಿಸಿ ಹಿಂದೂ ಧರ್ಮಕ್ಕೆ ಬರಮಾಡಿಕೊಳ್ಳುತ್ತದೆ. ಈ ಸಾಂಸ್ಕೃತಿಕ ಘರ್ಷಣೆ ಕ್ರೈಸ್ತ ಧರ್ಮದವರು ಭಾರತಕ್ಕೆ ಬಂದ ಮೇಲೆ ಹುಟ್ಟಿಕೊಂಡದ್ದು. ಈ ಮೊದಲು ಇಲ್ಲಿ 'ಅನೇಕತೆಯಲ್ಲಿ ಏಕತೆ' ಇತ್ತೇ ವಿನಾ ಸಂಘರ್ಷವಿರಲಿಲ್ಲ; ಕ್ರೈಸ್ತ ಮತಪ್ರಚಾರಕರು ಇದನ್ನು ಹುಟ್ಟು ಹಾಕಿದರೆಂಬುದೇ ಈ ಕೃತಿಯ ಮುಖ್ಯ ವಿಚಾರ.

ದೂರ ಸರಿದರು – ಗಂಡು ಹೆಣ್ಣಿನ ಸಂಬಂಧದ ಸ್ವರೂಪವೇನೆಂಬುದನ್ನು ವಿವರಿಸುತ್ತದೆ. ಆನಂದ್–ವಿನುತೆ, ವಸಂತ–ಉಮೆ, ವಾಸನ್–ವಿಜಯಾ, ರಂಗೇಗೌಡ–ಅವನ ಮಡದಿ ಇವರ ಪ್ರೇಮ ಸಂಬಂಧಗಳ ಬೌದ್ಧಿಕ ಮತ್ತು ಭಾವ ಸಹಚರ್ಯಗಳ ವಿಶ್ಲೇಷಣೆ. ಕಾಲೇಜು ಪರಿಸರ ಪ್ರತಿಯೊಬ್ಬ ವ್ಯಕ್ತಿಯ ಬದುಕಿನ ಸ್ವರೂಪವನ್ನು ರೂಪಿಸುವ ಆಗರ ಎಂಬ ಅಂಶ ಇಲ್ಲಿಯೂ ಇದೆ. ಶುದ್ಧ ಪ್ರೇಮದಿಂದ ಭಾವನಾತ್ಮಕವಾಗಿ ಒಂದಾದರೂ, ಬೌದ್ಧಿಕವಾಗಿ ಭಿನ್ನವಾಗುವ ಒಂದು ಅಂಶ ವಿಶಿಷ್ಟವಾದುದು. ಈ ಭಿನ್ನತೆ ವಿವಾಹಪೂರ್ವದಲ್ಲೇ ಕಾಣಿಸಿಕೊಂಡು ಎಲ್ಲರೂ ಪರಸ್ಪರ ದೂರವಾಗುತ್ತಾರೆ. ಆನಂದ ತನ್ನ ಓದು ಮುಗಿದ ಮೇಲೆ ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಅಧ್ಯಾಪಕನಾದರೆ, ವಿನುತೆ ಶಾಲೆಯೊಂದರ ಅಧ್ಯಾಪಕಿಯಾಗುತ್ತಾಳೆ. ಪರಸ್ಪರ ದೂರವಾದ ಇವರ ಬದುಕು ದುಃಖಕರವಾಗುತ್ತದೆ. ವಿನುತೆ ಯಾಂತ್ರಿಕವಾಗಿ ಬದುಕುತ್ತಾ ಕೊನೆಗೆ ಟೈಫಾಯಿಡ್ ಜ್ವರದಿಂದ ಮರಣ ಹೊಂದಿದರೆ, ಆನಂದ ನಿರ್ಲಿಪ್ತನಾಗುತ್ತಾನೆ. ಇತ್ತ ವಸಂತ–ಉಮೆಯರದೂ ಒಂದು ವಿಪರ್ಯಾಸ. ಪರಸ್ಪರ ವಿಚಾರಕ್ಕೆ ಅವಕಾಶವಾಗದ ಕಾರಣ ವಸಂತ ಉಮೆಯನ್ನು ತಿರಸ್ಕರಿಸಿ ಎಲ್ಲೆಲ್ಲೋ ಅಲೆದಾಡುತ್ತಾನೆ. ವಿಜಯ ರಾಮಾಮೂರ್ತಿಯನ್ನು ಪ್ರೀತಿಸಿ ಕೈಕೊಟ್ಟು ಅವನ ಬದುಕಿನ ಏರುಪೇರುಗಳಿಗೆ ಕಾರಣವಾದರೆ ರಮೆ ಒಬ್ಬರಿಂದ ಮೋಸಹೋಗುತ್ತಾಳೆ. ಬೌದ್ಧಿಕತೆಗೆ ಸಂಪೂರ್ಣ ಮನಸ್ಸನ್ನೊಪ್ಪಿಸಿ ಭಾವನೆಗಳಿಗೆ ಬೆಲೆಗೊಡದೆ ಇರುವುದರ ಪರಿಣಾಮವಿದು. ಆನಂದ ಕೊನೆಗೆ 'ಎಲ್ಲರನ್ನೂ ಒಂದುಗೂಡಿಸಬೇಕಾದ ಜೀವನಶಕ್ತಿಯ ನಡುವೆ ಭಿನ್ನತೆಯನ್ನು ಬೆಳೆಸಿ, ಒಂದಾಗಬೇಕೆಂದು ಯತ್ನಿಸುತ್ತಿರುವ ವ್ಯಕ್ತಿಗಳನ್ನೂ ದೂರಸರಿಸುವ ಶಕ್ತಿ ಯಾವುದು?' ಎಂಬುದನ್ನು ತತ್ವಶಾಸ್ತ್ರ, ಧರ್ಮಗ್ರಂಥಗಳಲ್ಲಿ ಕಾಣದೆ ನಿರಾಶನಾಗುತ್ತಾನೆ. ಈ ಎಲ್ಲವುಗಳ ನಡುವೆ ಭಾವನೆಗೆ ಬೆಲೆಗೊಟ್ಟ ಪದವೀಧರೆ ಜಗದಾಂಬ ಮಾತ್ರ ಮೆಟ್ರಿಕ್ಯುಲೇಶನ್ ಆದ ಗಂಡನೊಂದಿಗೆ ಶಾಂತ ಬದುಕನ್ನು ಕಾಣುತ್ತಾಳೆ. ಬುದ್ಧಿ–ಭಾವಗಳ ನಡುವಿನ ಬಿರುಕನ್ನು ತುಂಬಿಕೊಳ್ಳಲಾಗದ ವಾಸ್ತವ ಬದುಕಿನ ದುರಂತದ ಸ್ವರೂಪವನ್ನು ವಿವರಿಸುವುದೇ ಈ ಕಾದಂಬರಿಯ ವಸ್ತು.

ವಂಶವೃಕ್ಷ – ಪಾವಿತ್ರ್ಯ ರಕ್ಷಣೆ ಮತ್ತು ವಂಶಶ್ರೇಷ್ಠತೆಯ ಭಾವನೆಯಿಂದ ಉಂಟಾಗುವ ದುರಂತವನ್ನು ವಿವರಿಸುವ ಕೃತಿ. ಶ್ರೀನಿವಾಸ ಶ್ರೋತ್ರಿ, ಭಾಗೀರಥಮ್ಮ, ಲಕ್ಷ್ಮಿ, ಡಾ.ರಾಜಾರಾಯ, ನಾಗಲಕ್ಷ್ಮಿ, ಕರುಣಾರತ್ನೆ, ನಂಜುಂಡ, ಕಾತ್ಯಾಯನಿಯರ ಬದುಕಿನ ಕತೆ. ಒಮ್ಮೆ ಪ್ರವಾಹ ಬಂದು ಊರು ಕೊಚ್ಚಿಕೊಂಡು ಹೋಗಿ, ಅದರಲ್ಲಿ ತನ್ನ ಮಗ ಸಿಕ್ಕು ಸತ್ತರೂ ಶ್ರೀನಿವಾಸ ಶ್ರೋತ್ರಿಗಳು ಧೃತಿಗೆಡುವುದಿಲ್ಲ. ತನ್ನ ಪತ್ನಿ ಮತ್ತು ಸೊಸೆಗೆ ಸಮಾಧಾನ ಹೇಳಿ, ಧೈರ್ಯ ತುಂಬಿ ಮೊಮ್ಮಗ ಚೀನಿಯನ್ನು ತಾವೇ ಶ್ರದ್ಧೆಯಿಂದ ಸಾಕುತ್ತಾರೆ. ಸೊಸೆ ಕಾತ್ಯಾಯನಿ ಕಾಲೇಜು ಸೇರಿ ವಿದ್ಯಾಭ್ಯಾಸ ಮುಂದುವರೆಸುತ್ತಾಳೆ. ಮುಂದೆ ಪ್ರೊ.ಸದಾಶಿವರಾಯರ ಬಳಿಗೆ ಬರುತ್ತಿದ್ದ ರಾಜಾರಾಯನಲ್ಲಿ ಅನುರಕ್ತಳಾಗಿ ಮದುವೆಯಾಗಲು ಶ್ರೋತ್ರಿಯವರಲ್ಲಿ ಅನುಮತಿ ಕೇಳುತ್ತಾಳೆ. ಶ್ರೋತ್ರಿಗಳು ತಮ್ಮ ವಂಶದ ಗೌರವವನ್ನು ವಿವರಿಸಿ ಕೊನೆಯ ತೀರ್ಮಾನವನ್ನು ಕ್ಯಾತ್ಯಾಯನಿಯ ಮೇಲೆ ಬಿಡುತ್ತಾರೆ. ಮೊದಮೊದಲು ಸಂಯಮಳಾಗಿರಲೂ ಪ್ರಯತ್ನಿಸಿ ಕೊನೆಗೆ ಸಾಧ್ಯವಾಗದೆ ಪ್ರಕೃತಿಗೆ ಸೋತು ರಾಜಾರಾಯನನ್ನು ಮದುವೆಯಾಗುತ್ತಾಳೆ. ತನ್ನ ಪತ್ನಿಯಿಂದ ಸುಖ ದೊರೆಯದಿದ್ದರೂ, ಪತ್ನಿಯೇ ಕಳಿಸಿದರೂ ಲಕ್ಷ್ಮಿಯನ್ನು ಒಪ್ಪಿಕೊಳ್ಳದೆ ಕಾಮವನ್ನು ಮೆಟ್ಟನಿಂತ ಶ್ರೋತ್ರಿಯವರು ಇದರಿಂದಾಗಿ ಧೃತಿಗೆಡುತ್ತಾರೆ.

ಕಾತ್ಯಾಯನಿ ಮದುವೆಯಾದ ಮೇಲೆ ತನ್ನ ಮಗ ಚೇನಿಯನ್ನು ಕರೆದುಕೊಂಡು ಹೋಗಬೇಕೆಂದಿದ್ದರೂ ವಂಶದ ಗೌರವಕ್ಕಾಗಿ ಅಲ್ಲಿಯೇ ಬಿಟ್ಟು ಬರುತ್ತಾಳೆ. ಎಂ.ಎ. ಪದವಿ ಪಡೆದು ಕಾಲೇಜಿನಲ್ಲಿ ಉಪನ್ಯಾಸಕಿಯಾಗುತ್ತಾಳೆ. ಮೂರು ಬಾರಿ ಗರ್ಭಪಾತವಾದಾಗ ತಾನು ತನ್ನ ವಂಶಕ್ಕೆ ಮಾಡಿದ ಅಪಚಾರವೇ ಇದಕ್ಕೆ ಕಾರಣವೆಂದು ತಿಳಿದು ದಿನೇ ದಿನೇ ಸೊರಗುತ್ತಾಳೆ. ಒಮ್ಮೆ ಕಾಲೇಜಿನಲ್ಲಿ ಚೇನಿಯನ್ನೂ ಮಾತನಾಡಿಸುತ್ತಾಳೆ. ಅವನು ಮಾತನಾಡದಿದ್ದಾಗ ವ್ಯಥೆಯಿಂದ ಹಾಸಿಗೆ ಹಿಡಿಯುತ್ತಾಳೆ. ಇತ್ತ ತಂದೆಯವರ ಶ್ರಾದ್ಧದ ಹಿಂದಿನ ದಿನ ಶ್ರೋತ್ರಿಯವರಿಗೆ ಪೆಟ್ಟಿಗೆಯಲ್ಲಿ ಒಂದು ಕಾಗದ ಸಿಗುತ್ತದೆ. ತಾನು ಶ್ರೋತ್ರಿಯ ವಂಶದವನಲ್ಲ; ಹರಿಕತೆ ಶಾಮದಾಸರ ಮಗ ಎಂಬುದನ್ನು ಅದರಿಂದ ಅರಿಯುತ್ತಾರೆ. ಅನಂತರ ತನ್ನ ಆಸ್ತಿಯನ್ನೆಲ್ಲ ದಾನ ಮಾಡಿ ಸಂನ್ಯಾಸಿಯಾಗುತ್ತಾರೆ. ಕೊನೆಯದಾಗಿ ಕಾತ್ಯಾಯನಿಯನ್ನು ನೋಡಲೆಂದು ಬಂದಾಗ ಅವಳ ಅವಸ್ಥೆ ನೋಡಿ ಮರುಗುತ್ತಾರೆ. ಅವಳ ಈ ಸ್ಥಿತಿಗೆ ತಾನೇ ಕಾರಣನೆಂದು ಪಶ್ಚಾತ್ತಾಪ ಪಟ್ಟು ಕಾತ್ಯಾಯನಿ ಸತ್ತಮೇಲೆ ಅವಳ ಅಂತ್ಯಕ್ರಿಯೆ ಮಾಡುವಂತೆ ಚೇನಿಗೆ ಹೇಳಿ ಹೊರಟು ಹೋಗುತ್ತಾರೆ. ಶ್ರೋತ್ರಿಯವರಂತೆಯೇ ಪ್ರೊ. ಸದಾಶಿವರಾಯರು ಪತ್ನಿ ನಾಗಲಕ್ಷ್ಮಿ ಇದ್ದರೂ ಕರುಣಾರತ್ನೆಯನ್ನು ಮದುವೆಯಾಗುವುದು ಅವರ ಕುಟುಂಬದ ದುರಂತಕ್ಕೆ ಕಾರಣವಾಗುತ್ತದೆ. ಹೀಗೆ ವಂಶವೃಕ್ಷದ ಬೇರುಗಳು ಎಲ್ಲೆಡೆಯೂ ಶೋಧಿತವಾಗಿ ಜೀವನ ಮೌಲ್ಯಗಳ ವೈರುಧ್ಯ ಕಾಣಿಸಿಕೊಳ್ಳುತ್ತದೆ.

ಮತದಾನ – ಸ್ವಾತಂತ್ರ್ಯಾನಂತರದ ಭಾರತದ ಪರಿಸ್ಥಿತಿಯನ್ನು ಚಿತ್ರಿಸಿರುವ ಕಾದಂಬರಿ. ರಾಜಕೀಯ ವ್ಯವಸ್ಥೆ ಮನುಷ್ಯನ ಬದುಕನ್ನು ವೈಯಕ್ತಿಕವಾಗಿ ಮತ್ತು ಸಾಮಾಜಿಕವಾಗಿ ಗೊಂದಲಗೊಳಿಸಿರುವ ಬಗೆ ಇದರ ವಸ್ತು. ಗ್ರಾಮೀಣ ಪ್ರದೇಶಗಳೂ ಇದರಿಂದ ಬೇರೆಯಾಗಿಲ್ಲ. ಡಾ. ಶಿವಪ್ಪ ನಿಃಸ್ವಾರ್ಥಿ ಸಮಾಜ ಸೇವಕನಾಗಿ ಹಳ್ಳಿಯ ಬಡಜನರ ಸೇವೆ ಮಾಡುತ್ತಿರುತ್ತಾನೆ. ಅವನ ಜನಪ್ರಿಯತೆಯನ್ನು ಕಂಡು ಅದನ್ನು ರಾಜಕೀಯಕ್ಕೆ ಬಳಸಿಕೊಳ್ಳುತ್ತಾರೆ ಸ್ವಾರ್ಥಿಜನ. ಮಂತ್ರಿ ಅಪ್ಪಾಜಿಯನ್ನು ಸೋಲಿಸಲೆಂದು ಡಾ. ಶಿವಪ್ಪನನ್ನು ಹುರುದುಂಬಿಸಿ ಚುನಾವಣೆಗೆ ನಿಲ್ಲಿಸುತ್ತಾರೆ. ಇದರ ಮುಖ್ಯ ಗುರಿ ಸಾದರವಳ್ಳಿಯವರ ಮಗ ಪ್ರಕಾಶಕುಮಾರನನ್ನು ಗೆಲ್ಲಿಸುವುದೇ ಆಗಿರುತ್ತದೆ. ಈ ವಿಚಾರವನ್ನರಿಯದ ಶಿವಪ್ಪ ಚುನಾವಣೆಗೆ ನಿಂತು ಅದರ ಗಡಿಬಿಡಿಯಲ್ಲಿ ಕೆಲವರ ಸೇವೆ ಮಾಡಲು ಸಾಧ್ಯವಾಗುವುದಿಲ್ಲ. ಪರಿಣಾಮವಾಗಿ ಒಬ್ಬ ಬಡವನ ಹೆಂಡತಿ ಸಾಯುತ್ತಾಳೆ. ತನ್ನ ತಾಯಿ ಕಲ್ಲಮ್ಮನನ್ನೂ ಉಳಿಸಿಕೊಳ್ಳಲಾಗುವುದಿಲ್ಲ. ಚುನಾವಣೆಯ ಎರಡು ದಿನ ಹಿಂದೆ ಅವನನ್ನು ಅಪಹರಿಸಿ ಚುನಾವಣೆಯ ದಿನ ಬಿಡಲಾಗುತ್ತದೆ. ಚುನಾವಣೆಯಲ್ಲಿ ಪ್ರಕಾಶಕುಮಾರ ಗೆದ್ದು ಬರುತ್ತಾನೆ. ಮಂತ್ರಿ ಅಪ್ಪಾಜಿಯವರನ್ನು ಬೆಂಬಲಿಸಿದ್ದ ಕಂಟ್ರಾಕ್ಟರ್ ರಾಮಲಿಂಗಪ್ಪ ತನ್ನ ಆಸ್ತಿಯನ್ನೆಲ್ಲ ಕಳೆದುಕೊಂಡು ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಈ ಎಲ್ಲವನ್ನು ಅರಿತ ಶಿವಪ್ಪನಿಗೆ ತನ್ನ ತಪ್ಪಿನ ಅರಿವಾಗುತ್ತದೆ. ಅನಂತರ ಆತ ತನ್ನ ಜೀವನವನ್ನೆಲ್ಲ ಬಡಜನರ ಸೇವೆಗೇ ಮುಡುಪಾಗಿಡುತ್ತಾನೆ. ತನಗೆ ಸಹಾಯಕಳಾದ ರಂಗಲಕ್ಷ್ಮಿಯನ್ನು ಮದುವೆಯಾಗುತ್ತಾನೆ. ಈ ಪರಿಸ್ಥಿತಿ ಭಾರತದಾದ್ಯಂತವೂ ಇದೆ. ಭೈರಪ್ಪನವರು ಮೂವತ್ತು ವರ್ಷಗಳ ಹಿಂದೆ ಬರೆದ ಈ ಕೃತಿ ಇಂದಿಗೂ ಮುಖ್ಯವಾಗುವುದು ಈ ಕಾರಣದಿಂದಾಗಿಯೇ. ಜಾತಿ, ಧರ್ಮಾದಿಗಳೂ ರಾಜಕೀಯದ ಮೇಲೆ ಗಂಭೀರ ಪರಿಣಾಮ ಬೀರುವುದನ್ನು ಕಾದಂಬರಿಕಾರರು ಸಾಧಾರವಾಗಿ ನಿರೂಪಿಸಿದ್ದಾರೆ.

ನಾಯಿನೆರಳು – ಪುನರ್ಜನ್ಮದ ವಸ್ತುವುಳ್ಳ ಕಾದಂಬರಿ. ಗಂಗಾಪುರದ ತಿರುಮಲ ಜೋಯಿಸರ ಹೆಂಡತಿ ಇಳಿವಯಸ್ಸಿನಲ್ಲಿ ಗರ್ಭಧರಿಸಿ ಗಂಡು ಮಗುವಿಗೆ ಜನ್ಮನೀಡಿ ಸಾಯುತ್ತಾಳೆ. ಅವನಿಗೆ ಕ್ಷೇತ್ರಪಾಲನೆಂದು ನಾಮಕರಣ ಮಾಡುತ್ತಾರೆ. ಆ ಹುಡುಗ ತನಗೆ ಬುದ್ಧಿ ತಿಳಿದಂದಿನಿಂದಲೂ 'ನನಗೆ ಮದುವೆಯಾಗಿದೆ, ಅವಳ ಹೆಸರು ವೆಂಕಮ್ಮ, ಒಂದು ಗಂಡು ಮಗುವಿದೆ' ಎಂದು ಹೇಳುತ್ತಿರುತ್ತಾನೆ. ಪ್ರಯಾಗದಲ್ಲಿ ಕಾಲುಜಾರಿ ಬಿದ್ದು ಸತ್ತ ವಿಶ್ವೇಶ್ವರಯ್ಯನೇ ಈಗ ಕ್ಷೇತ್ರಪಾಲನಾಗಿ ಹುಟ್ಟಿರುತ್ತಾನೆ. ಅವನಿಗೆ ಪೂರ್ವಜನ್ಮದ ಸ್ಮರಣೆ ಗಾಢವಾಗಿರುತ್ತದೆ. ಅದನ್ನೇ ಈಗ ಹೇಳುತ್ತಿರುತ್ತಾನೆ. ಜೋಗಿಹಳ್ಳಿಯ ಅಚ್ಚಣ್ಣಯ್ಯ, ನಂಜಕ್ಕಯ್ಯರ ಮಗನಾದ ವಿಶ್ವೇಶ್ವರಯ್ಯನ ಹೆಂಡತಿಗೆ ಒಂದು ಗಂಡು ಮಗು ಜನಿಸುತ್ತದೆ. ಹುಟ್ಟಿದ ಮಗುವಿನ ನಕ್ಷತ್ರ ಸರಿಯಾಗಿಲ್ಲದ ಕಾರಣ ಐದು ತಿಂಗಳು ಮಗುವಿನ ಮುಖವನ್ನು ಆತ ನೋಡಬಾರದೆಂದಾಗುತ್ತದೆ. ಆ ಸಮಯದಲ್ಲೇ ಅವನು ಪುಟ್ಟಣ್ಣಯ್ಯನ ಜೊತೆ ಪ್ರಯಾಗಕ್ಕೆ ಹೋಗಿ ಸಾವಿಗೀಡಾಗುತ್ತಾನೆ. ಈಗ ಅವನು ಮತ್ತೇ ಹುಟ್ಟಿ ಹದಿನೆಂಟು ಇಪ್ಪತ್ತು ವರ್ಷಗಳಾಗಿವೆ. ಈ ವಿಚಾರ ತಿಳಿದು ಜೋಗಿಹಳ್ಳಿಯಿಂದ ಅವನ ತಂದೆ ತಾಯಿಯರು ಬರುತ್ತಾರೆ. ಅವರನ್ನೆಲ್ಲ ಸರಿಯಾಗಿ ಗುರುತಿಸುತ್ತಾನೆ. ಕೊನೆಗೆ ತನಗೂ ತಿರುಮಲ ಜೋಯಿಸರಿಗೂ ಯಾವ ಸಂಬಂಧವೂ ಇಲ್ಲವೆಂದು ಹೇಳಿ ಅವರೊಡನೆ ಜೋಗಿಹಳ್ಳಿಗೆ ಬರುತ್ತಾನೆ. ಆ ವೇಳೆಗಾಗಲೇ ಅವನ ಮಗ ಅಚ್ಯುತ ಕಾಲೇಜು ಓದುತ್ತಿರುತ್ತಾನೆ. ತಾಯಿ ಅಜ್ಜಿಯವರಿಂದ ವಿಷಯ ತಿಳಿದ ಆತ ಯಾರೋ ಕಳ್ಳ ಸನ್ಯಾಸಿ ತಮಗೆ ಮೋಸ ಮಾಡಿದ್ದಾನೆಂದು ತಿಳಿದು ವಿರೋಧಿಸುತ್ತಾನೆ. ಪುಟ್ಟಿಯೊಂದಿಗೆ ಲೈಂಗಿಕ ಸಂಬಂಧ ಹೊಂದಿದ ಕ್ಷೇತ್ರಪಾಲನನ್ನು ಆ ಆಪಾದನೆಯ ಮೇಲೆ ಜೈಲಿಗೆ ಕಳಿಸುತ್ತಾನೆ. ಅವನಿಂದ ತಾಯಿಯಲ್ಲಿ ಜನಿಸಿದ ಮಗುವನ್ನು ತಮ್ಮನೆಂದು ಒಪ್ಪಿಕೊಳ್ಳುವುದಿಲ್ಲ. ಮುಂದೆ ಅವನ ಅಜ್ಜಿ ಹೃದಯಾಘಾತದಿಂದ ಮರಣ ಹೊಂದುತ್ತಾಳೆ. ಅಜ್ಜ ಸಂನ್ಯಾಸಿಯಾಗುತ್ತಾನೆ. ಮದುವೆಯಾದ ಅಚ್ಯುತನಿಗೆ ಮಕ್ಕಳಾಗುವುದಿಲ್ಲ. ತಾಯಿ ದೂರವಾಗಿರುತ್ತಾಳೆ. ಕ್ಷೇತ್ರಪಾಲನ ಸನ್ನಡತೆಯಿಂದ ಅವನಿಗೆ ಒಂದು ವರ್ಷ ಶಿಕ್ಷೆ ಕಡಿಮೆಯಾಗಿ ಹೆಂಡತಿಯ ಬಳಿಗೆ ಬಂದು ಅವಳಿಗೆ ಮುನ್ನೂರು ಬೆಳ್ಳಿಯ ನಾಣ್ಯಗಳನ್ನು ಕೊಟ್ಟು ಹೋಗುತ್ತಾನೆ. ಅಚ್ಯುತ ತಾಯಿಯನ್ನು ಕರೆದರೂ, ಅನಂತನನ್ನು ತಮ್ಮನೆಂದು ಒಪ್ಪಿಕೊಳ್ಳದಿರುವುದರಿಂದ ಅವಳೂ ಹೋಗುವುದಿಲ್ಲ. ಕ್ಷೇತ್ರಪಾಲ ಹುಟ್ಟಿದಂದಿನಿಂದಲೂ ಅವನೊಂದಿಗೆ ಅವನ ಕರ್ಮದ ನೆರಳಾಗಿ 'ನಾಯಿ' ಇರುತ್ತದೆ. ಜೈಲಿಗೆ ಹೋದಾಗ ಅದು ಪೋಲೀಸನ ಹೊಡೆತದಿಂದ ಸಾಯುತ್ತದೆ.

ತಬ್ಬಲಿಯು ನೀನಾದೆ ಮಗನೆ – ಭಾರತೀಯ ಸಂಸ್ಕೃತಿಯ 'ಗೋಪೂಜೆ' ಪವಿತ್ರವೆಂಬ ನಂಬಿಕೆಯನ್ನು ಒಳಗೊಂಡ ಕೃತಿ. ಗೋಪೂಜೆ ಹಿಂದೂಗಳಿಗೆ ಶ್ರೇಷ್ಠ ; ಗೋವಿನಲ್ಲಿ ಮೂವತ್ಮೂರು ಕೋಟಿ ದೇವತೆಗಳಿವೆ ಎಂಬುದು ಒಂದು ನಂಬಿಕೆ. ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವದಿಂದ ಇಲ್ಲಿ ಸಂಘರ್ಷ ಆರಂಭವಾಯಿತು. ಕಾಳಿಂಗೇಗೌಡನ ಮೊಮ್ಮಗ ಕಾಳಿಂಗ ವಿದೇಶದಲ್ಲಿ ವಿದ್ಯಾಭ್ಯಾಸ ಮಾಡಿ ಹಿಂದಿರುಗುತ್ತಾನೆ. ಅಲ್ಲಿಯೇ ಅವನು ಹಿಲ್ಡಾ ಎಂಬುವವಳನ್ನು ಮದುವೆಯಾಗಿರುತ್ತಾನೆ. ಅವನು ತನ್ನ ಹಳ್ಳಿಗೆ ಬಂದಾಗ ಹಿಲ್ಡಾ ಮತ್ತು ವೆಂಕಟರಮಣ ಎಂಬ ಪೂಜಾರಿಯರ ಚಿಂತನೆಗಳ ಸಂಘರ್ಷ ಆರಂಭವಾಗುತ್ತದೆ. ಅಹಿಂಸೆಯನ್ನು ಪವಿತ್ರವೆಂದು ಒಪ್ಪುವ ವೆಂಕಟರಮಣ,

ಪ್ರಾಣಿಗಳು ಇರುವುದೇ ಮನುಷ್ಯನ ಆಹಾರಕ್ಕಾಗಿ ಎನ್ನುವ ಹಿಲ್ಡಾ–ಹೀಗೆ ಎರಡು ಭಿನ್ನ ನಂಬಿಕೆ ಇಬ್ಬರದು. ಈ ನಡುವೆ ಕಾಳಿಂಗ ಸಂಕೀರ್ಣ ಮನಸ್ಸುಳ್ಳವನಾಗಿರುತ್ತಾನೆ. 'ಮಾನವ ಪ್ರೀತಿ ಕೇವಲ ಮಾನವರಿಗಾಗಿ ಮೀಸಲಾಗಿರಬೇಕಿಲ್ಲ. ಎಲ್ಲ ಪ್ರಾಣಿಗಳಿಗೂ ದೊರಕಬೇಕು' ಎಂಬ ತಾತ್ತ್ವಿಕ ಅಂಶದ ಮೇಲೆ ಈ ಕೃತಿಯು ಬೆಳೆಯುತ್ತಾ ಹೋಗುತ್ತದೆ. ಕಾಳಿಂಗನ ತಾಯಿ ಹಿಲ್ಡಾಳ ವರ್ತನೆಯಿಂದ ಬೇರೆ ಇರುತ್ತಾಳೆ. ಒಂದು ದಿನ ಹಿಲ್ಡಾ ಹಟದಿಂದ ಒಂದು ಹಸುವನ್ನು ಕಡಿದು ಅಡುಗೆ ಮಾಡುತ್ತಾಳೆ. ವಿಷಯ ತಿಳಿದ ವೆಂಕಟರಮಣ ಅದನ್ನು ವಿರೋಧಿಸುತ್ತಾನೆ. ಕಾಳಿಂಗನ ತಾಯಿ ಮರಣಹೊಂದುತ್ತಾಳೆ. ಕಾಳಿಂಗನಿಗೆ ಮಗು ಹುಟ್ಟುತ್ತದೆ, ಆ ಮಗುವಿಗೆ ಹಾಲು ಕುಡಿಸಲು ಹಿಲ್ಡಾಳ ಎದೆಯಲ್ಲಿ ಹಾಲಿರುವುದಿಲ್ಲ. ವಿಷಯ ತಿಳಿದ ವೆಂಕಟರಮಣ ತಾಯವ್ವ ತನಗೆ ದಾನ ಮಾಡಿದ್ದ ಪುಣ್ಯಕೋಟಿಯನ್ನು ಕಾಳಿಂಗನಿಗೆ ಕೊಡುತ್ತಾನೆ. ಇತ್ತ ಹಿಲ್ಡಾ ಮನೆಯಲ್ಲಿದ್ದ ಮುದಿ ಗೋವುಗಳನ್ನು ಕಟುಕನಿಗೆ ಮಾರುತ್ತಾಳೆ. ಇದರಿಂದ ನೊಂದ ಕಾಳಿಂಗ ಅವುಗಳನ್ನು ಮರಳಿ ತರಲು ಹೋಗಿ ಗುರುತಿಸಲಾಗದೆ ತಬ್ಬಲಿಯಂತಾಗಿ ಹಿಂತಿರುಗುತ್ತಾನೆ. 'ನಮಗೆ ಟ್ರಾಕ್ಟರೂ ಬೇಕು, ಗೋಪೂಜೆಯೂ ಬೇಕು' ಎಂಬ ಅಂಶದ ಮೂಲಕ ಕಾದಂಬರಿ ಎರಡು ಸಂಸ್ಕೃತಿಗಳನ್ನು ಪ್ರತಿನಿಧಿಸುತ್ತದೆ. 'ಭಾರತೀಯರಿಗೆ ಗೋವು ಪೂಜ್ಯ, ಪಾಶ್ಚಾತ್ಯರಿಗೆ ವಾಣಿಜ್ಯ' ಎಂಬುದನ್ನು ಕಾದಂಬರಿ ಮುಖ್ಯವಾಗಿ ಗುರುತಿಸಿದೆ.

ಗೃಹಭಂಗ – ತಾಯಿಯ ಬೇಜವಾಬ್ದಾರಿ ಹಾಗೂ ಹಳ್ಳಿಯವರ ಮೋಸದಿಂದ ಒಂದು ಮನೆತನ ಸಂಪೂರ್ಣ ನಾಶವಾಗಿ ಒಬ್ಬನೇ ಒಬ್ಬ ಹುಡುಗ ಮನೆಬಿಟ್ಟು ಹೋಗುವ ವಿಷಯವುಳ್ಳ ಕಾದಂಬರಿ. ಗಂಗಮ್ಮ, ಚೆನ್ನಿಗರಾಯ ಮತ್ತು ಅಪ್ಪಣ್ಣಯ್ಯರ ಕುಟುಂಬದ ದುರಂತ ಕಥೆ. ಬಾಯಾಳಿ ಗಂಗಮ್ಮ, ಅವಳ ಮಕ್ಕಳು ಸೋಮಾರಿಗಳು ಮತ್ತು ಬೇಜವಾಬ್ದಾರಿಯುಳ್ಳವರು. ಒಮ್ಮೆ ಅವರು ತಾಯಿಯೊಂದಿಗೆ ಜಗಳವಾಡಿ ಊರಿನ ಕಬ್ಬಿನ ಗದ್ದೆಗೆ ಬೆಂಕಿ ಹಚ್ಚುತ್ತಾರೆ. ಇದೇ ಸಮಯವೆಂದರಿತ ಪಟೇಲ ಶಿವೇಗೌಡ ಗಂಗಮ್ಮನ ಆಸ್ತಿಯನ್ನೆಲ್ಲ ಆಧಾರವಾಗಿ ಬರೆಸಿಕೊಂಡು ಅವಳಿಗೆ ದಂಡ ಕಟ್ಟಲು ಎರಡು ಸಾವಿರ ರೂಪಾಯಿ ಕೊಡುತ್ತಾನೆ. ಚೆನ್ನಿಗರಾಯ ಕಂಠೀಜೋಯಿಸರ ಮಗಳು ನಂಜಮ್ಮನನ್ನು ಮದುವೆಯಾಗುತ್ತಾನೆ. ಜೊತೆಗೆ ಶಿವೇಗೌಡನಿಂದ ಶಾನುಭೋಗಿಕೆಯ ಛಾರ್ಜು ಬರುತ್ತದೆ. ಮೊದಲೇ ಸೋಮಾರಿಯಾಗಿದ್ದ ಆತ ಅದನ್ನು ಮಾಡದಿದ್ದಾಗ ನಂಜಮ್ಮ ಅದನ್ನು ನಿರ್ವಹಿಸುತ್ತಾಳೆ. ಗಂಗಮ್ಮನ ಮತ್ತೊಬ್ಬ ಮಗ ಅಪ್ಪಣ್ಣಯ್ಯನಿಗೂ ಶ್ರೀಮಂತರ ಹುಡುಗಿ ಸಾತುವಿನೊಂದಿಗೆ ಮದುವೆಯಾಗುತ್ತದೆ. ಆದರೆ ಕುಟುಂಬದ ಸ್ಥಿತಿ ಮಾತ್ರ ಸುಧಾರಿಸುವುದಿಲ್ಲ. ಪಟೇಲನಿಗೆ ಆಧಾರವಾಗಿಟ್ಟಿದ್ದ ಜಮೀನು ಹೋಗುತ್ತದೆ. ನಂಜಮ್ಮ ಚೆನ್ನಿಗರಾಯನೊಂದಿಗೆ ಬೇರೆ ಸಂಸಾರ ಹೂಡುತ್ತಾಳೆ. ಅಪ್ಪಣ್ಣಯ್ಯನ ಹೆಂಡತಿ ಸಾತು ಬೇರೊಬ್ಬನನ್ನು ಮದುವೆಯಾಗುತ್ತಾಳೆ. ಊರಿಗೆ ಪ್ಲೇಗು ಬಂದಾಗ ನಂಜಮ್ಮನ ಮೂವರು ಮಕ್ಕಳಲ್ಲಿ ಇಬ್ಬರು ಸತ್ತು ವಿಶ್ವನಾಥನೊಬ್ಬ ಮಾತ್ರ ಉಳಿಯುತ್ತಾನೆ. ಒಂದು ಮನೆ ಕಟ್ಟಬೇಕೆಂದು ತೀವ್ರ ಅಭಿಲಾಶೆಯುಳ್ಳ ನಂಜಮ್ಮ ಮನೆಕಟ್ಟಿ ಮುಗಿಸಿ ತಾನೂ ಸಾಯುವುದರೊಂದಿಗೆ ಗೃಹಭಂಗವಾಗುತ್ತದೆ. ಯಾವ ಜವಾಬ್ದಾರಿಯೂ ಇಲ್ಲದ ಚೆನ್ನಿಗರಾಯ ಈಗಲೂ ದುಃಖಿಸುವುದಿಲ್ಲ. ಕೊನೆಗೆ ಮಾದೇವಯ್ಯ ವಿಶ್ವನಾಥನನ್ನು ಕರೆದುಕೊಂಡು ಊರುಬಿಟ್ಟುಹೋಗುತ್ತಾರೆ. ತನ್ನ ಮಗ ಹೋಗುತ್ತಿರುವುದನ್ನು ಕಂಡು

ಚೆನ್ನಿಗರಾಯ ಮಾತನಾಡಿಸಬೇಕೆಂದುಕೊಳ್ಳುತ್ತಾನೆ. ಆದರೆ 'ಅಗತಾನೆ ಹಾಕಿದ ಹೊಗೆಸೊಪ್ಪನ್ನು ಉಗುಳಬೇಕಲ್ಲ ; ಉಗುಳಿದರೆ ಬೇರೆ ಇಲ್ಲ'ವೆಂದು ಸುಮ್ಮನಾಗುತ್ತಾನೆ. ನಂಜಮ್ಮನ ಸಾವಿನೊಂದಿಗೆ ಇಡೀ ಚೈತನ್ಯವೇ ಉಡುಗುತ್ತದೆ.

ನಿರಾಕರಣ – ಅಪೂರ್ಣ ಅನುಭವದ ಚಂಚಲ ಮನಸ್ಸಿನ ಒಬ್ಬ ವ್ಯಕ್ತಿಯ ಕತೆ. ನರಹರಿ ವೈಯಕ್ತಿಕ ಬದುಕಿನಲ್ಲಿ ತನ್ನವರಿಂದ ಹೆಚ್ಚು ಅನ್ಯಾಯಕ್ಕೊಳಗಾಗಿ ಊರು ಬಿಟ್ಟು ಮುಂಬಯಿಗೆ ಬರುತ್ತಾನೆ. ಸದಾ ವೇದಾಂತ ಬೋಧಿಸುವ ನಿರ್ಲಿಪ್ತತೆಯನ್ನು ಕುರಿತು ಚಿಂತಿಸುತ್ತಾ ಒಂಟಿತನದಲ್ಲಿಯೇ ಬದುಕುತ್ತಾನೆ. ಒಮ್ಮೆ ಗೆಳೆಯ ರಾಮಕೃಷ್ಣನೊಂದಿಗೆ ಅವನ ಹಳ್ಳಿಗೆ ಬಂದ ನರಹರಿ, ಅವನ ತಂಗಿ ಲಲಿತೆಯನ್ನು ನೋಡಿ ಮೊದಮೊದಲು ನಿರಾಕರಿಸಿದರೂ ಅನಂತರ ಮದುವೆಯಾಗಿ ಸಂಸಾರ ಹೂಡುತ್ತಾನೆ. ಅವಳು ಭವಾನಿ, ವಿಜಯ, ಗಣೇಶ ಎಂಬ ಮಕ್ಕಳಿಗೆ ಜನ್ಮ ನೀಡಿ ಸಾಯುತ್ತಾಳೆ. ಅನಂತರ ರಾಮಕೃಷ್ಣ, ಅವನ ತಾಯಿಯರು ಸತ್ತು ಅನಿವಾರ್ಯವಾಗಿ ವೈದೇಹಿಯನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಆದರೆ ಅವಳೂ ರಾಮಲಕ್ಷ್ಮಣರೆಂಬ ಅವಳಿಗಳಿಗೆ ಜನ್ಮನೀಡಿ ಪ್ರಾಣ ಬಿಡುತ್ತಾಳೆ. ಈ ಐದು ಮಕ್ಕಳ ನಿರ್ವಹಣೆ ಸಾಧ್ಯವಾಗದೆ ಅವುಗಳನ್ನು ಸುಸಂಸ್ಕೃತ ತಂದೆ ತಾಯಿಯರಿಗೆ ದತ್ತುಕೊಟ್ಟು ಸಂನ್ಯಾಸಿಯಾಗಿ ಹಿಮಾಲಯಕ್ಕೆ ಹೋಗುತ್ತಾನೆ. ಅಲ್ಲಿ ಅವನು ಅಂದುಕೊಂಡಂತೆ ಇರಲು ಆಗುವುದಿಲ್ಲ. ಮಕ್ಕಳನ್ನು ಸಾಕಲಾಗದ 'ಅಪರಾಧಿ ಪ್ರಜ್ಞೆ' ಕಾಡುತ್ತದೆ. ಸಂಸಾರದಲ್ಲಿದ್ದಾಗ ಸಂನ್ಯಾಸದ ಕಡೆಗೆ ತುಡಿಯುತ್ತಿದ್ದ ಆತ ಹಿಮಾಲಯದ ತುದಿಗೇರಿದರೂ ಮುಂಬಯಿಯ ಬದುಕಿನ ವ್ಯಾಮೋಹದಿಂದ ಬಿಡಿಸಿಕೊಳ್ಳಲಾಗುವುದಿಲ್ಲ. ಅಲ್ಲಿಂದ ಹಿಂತಿರುಗಿ ಕಾಶಿಗೆ ಬಂದು ಭಿಕ್ಷೆ ಬೇಡುತ್ತಾ ಕಾಲ ನೂಕುತ್ತಾನೆ. ಕೊನೆಗೆ ಒಬ್ಬನೊಂದಿಗೆ ಲಲ್ಲೂ ಎಂಬ ವೇಶ್ಯೆಯಲ್ಲಿ ಕೂಡುತ್ತಾನೆ. ಅದರಿಂದ ಬೇಸತ್ತು ಮುಂಬಯಿಯ ಅನಾಥಾಶ್ರಮವೊಂದರ ವಾರ್ಡನ್ ಕೆಲಸಕ್ಕೆ ಸೇರಿ, ಮಕ್ಕಳ ಸೇವೆಯಲ್ಲಿ ತನ್ನ ಉಳಿದ ಬದುಕನ್ನು ಕಳೆಯಲು ಯೋಚಿಸುತ್ತಾನೆ. ಅವನ ಸಹೋದ್ಯೋಗಿ ರೇಳೆ ನರಹರಿಯ ಮಕ್ಕಳ ಬಗ್ಗೆ ಸಮೀಕ್ಷೆ ನಡೆಸಿದಾಗ ವಿಜಯ, ಗಣೇಶ ಸುಖವಾಗಿದ್ದು, ರಾಮ ಕಷ್ಟಪಡುತ್ತಿದ್ದು ಲಕ್ಷ್ಮಣ ಸತ್ತಿರುವ ವಿಚಾರ ತಿಳಿಯುತ್ತದೆ. ಭವಾನಿ ಮೊದಮೊದಲು ದತ್ತು ಪಡೆದವರಿಂದ ಸುಖವಾಗಿದ್ದರೂ ಅನಂತರ ಅವರ ಪ್ರೀತಿ ಕಳೆದುಕೊಂಡು ಬದುಕುತ್ತಿರುತ್ತಾಳೆ. ಒಮ್ಮೆ ಕೆಲಸಕ್ಕೆಂದು ಮುಂಬಯಿಗೆ ಬಂದ ಆಕೆ ಶೆಣೈಯವರಿಂದ ತಂದೆಯ ವಿಚಾರ ತಿಳಿದು ಅನಾಥಶ್ರಮಕ್ಕೆ ಬರುತ್ತಾಳೆ. ಅಲ್ಲಿ ತನ್ನ ತಮ್ಮ ರಾಮನ ಸ್ಥಿತಿಯನ್ನು ಕಂಡು ಮರುಗಿ ತಂದೆಯೊಂದಿಗೆ ವಿಚಾರಿಸಿ, ತಾನೇ ಕೆಲಸ ಮಾಡಿ ರಾಮನನ್ನು ಸಾಕುವುದಾಗಿ ಹೇಳುತ್ತಾಳೆ. ನರಹರಿಯೂ ಅದಕ್ಕೆ ಒಪ್ಪುತ್ತಾನೆ. ಒಂದನ್ನು ನಿರಾಕರಿಸುತ್ತಾ ಮತ್ತೊಂದರತ್ತ ಹೊರಳುತ್ತಿದ್ದ ನರಹರಿ ಕೊನೆಗೆ ವೈಯಕ್ತಿಕ ಮತ್ತು ಸಾಮಾಜಿಕ ಆಯಾಮಗಳೆರಡರಲ್ಲೂ ಜವಾಬ್ದಾರಿ ವಹಿಸಿಕೊಳ್ಳುತ್ತಾನೆ.

ಜಲಪಾತ – ಆದರ್ಶ ವಾಸ್ತವಗಳ ನಡುವಿನ ವಿಚಾರವನ್ನೊಳಗೊಂಡ ಕಾದಂಬರಿ. ಮುಂಬಯಿಯಂಥ ನಗರದಲ್ಲಿ ಸಹಜವಾಗಿದ್ದ ಬದುಕು ಗ್ರಾಮೀಣ ಪ್ರದೇಶದಲ್ಲಿ ಸಂಕೀರ್ಣವಾಗುವುದನ್ನು ನಿರೂಪಿಸುವ ಕೃತಿ. ಕಲಾವಿದ ಶ್ರೀಪತಿ ತನ್ನ ಪತ್ನಿ ವಸುವಿನೊಂದಿಗೆ ಮುಂಬಯಿಯಿಂದ ತನ್ನ

ಹಳ್ಳಿಗೆ ಬರುತ್ತಾನೆ. ನಿತ್ಯಜೀವನದ ಸಾಮಾನ್ಯ ಅಂಶಗಳಿಂದ ಹಿಡಿದು ಮಕ್ಕಳ ವಿದ್ಯಾಭ್ಯಾಸದವರೆಗೂ ಅವನಿಗೆ ಸಮಸ್ಯೆಗಳು ಎದುರಾಗುತ್ತವೆ. ಇತ್ತ ಅವನ ಏಳಿಗೆಯನ್ನು ಸಹಿಸದ ಜನ ಅವನಿಗೆ ತೊಂದರೆ ಕೊಡಲಾರಂಭಿಸುತ್ತಾರೆ. ಕಷ್ಟಪಟ್ಟು ಬೆಳೆದ ತರಕಾರಿಗಳೆಲ್ಲ ರಾತ್ರೋರಾತ್ರಿ ಕಳುವಾಗುತ್ತವೆ. ಟೈಫಾಯಿಡ್ ಜ್ವರದಿಂದ ಒಬ್ಬ ಮಗಳು ಸತ್ತಾಗ, ಶ್ರೀಪತಿ ತನ್ನ ಆಸ್ತಿಯನ್ನೆಲ್ಲ ಮಾರಿ ಮುಂಬಯಿಗೆ ಹಿಂತಿರುಗಲು ಯೋಚಿಸುತ್ತಾನೆ. ಆದರೆ ಹಳ್ಳಿಯವರೆಲ್ಲ ಒಟ್ಟಾಗಿ ಅತನ ಆಸ್ತಿಯನ್ನು ಅತಿಕಡಿಮೆ ಬೆಲೆಗೆ ಕೇಳುತ್ತಾರೆ. ಕೊನೆಗೆ ಅಮಲ್ದಾರನಾಗಿದ್ದ ವಸುಂಧರೆಯ ಅಣ್ಣನ ಸಹಾಯದಿಂದ ಹದಿನೈದು ಸಾವಿರ ರೂಪಾಯಿಗೆ ಮಾರಿ ಮುಂಬಯಿಗೆ ಹೋಗುತ್ತಾನೆ. ಸೃಷ್ಟಿಶಕ್ತಿಯಿಂದ ವಿಜೃಂಭಿಸುವ ಜೀವನ ಪ್ರವೃತ್ತಿ ಮತ್ತು ಅದನ್ನು ನಿಯಂತ್ರಿಸುವ ಪರಿಸ್ಥಿತಿಯ ಸ್ವರೂಪವೇ ಇದರ ಕಥಾವಸ್ತು.

ನೆಲೆ – ಹುಟ್ಟು ಸಾವುಗಳ ನಿಜದ ನೆಲೆಯನ್ನು ಕುರಿತ ಕಾದಂಬರಿ. ಜವರಾಯಿಯ ಸಾವು ಕಾಳಪ್ಪ, ಕುಮಾರ, ಪಾರ್ವತಮ್ಮ ಮುಂತಾದವರ ಬದುಕಿನ ಸ್ವರೂಪವನ್ನು ಕಂಡುಕೊಳ್ಳುವುದಕ್ಕೆ ಕಾರಣವಾಗುತ್ತದೆ. 'ನಿನಗೆ ನನ್ನನ್ನು ಹುಟ್ಟಿಸುವಂತೆ ಯಾರು ಕೇಳಿದ್ದರು ?' ಎಂದು ಕುಮಾರ ಜವರಾಯಿಯನ್ನು ಕೇಳುತ್ತಾನೆ. ಇದರ ಮೂಲಕ ತಂದೆ–ಮಕ್ಕಳ ಸಂಬಂಧ ಎಂಥದು ಎಂಬುದು ಚರ್ಚಿತವಾಗುತ್ತದೆ. ಕಾಳಪ್ಪ ಈ ವಿಚಾರವನ್ನು ಕುಮಾರನೊಂದಿಗೆ ಮಾತನಾಡುತ್ತಾನೆ. ಜೊತೆಗೆ ಆಕಾಶದಲ್ಲಿನ ನಕ್ಷತ್ರ ರಾಶಿಗಳ ಬಗ್ಗೆ ಹೇಳುತ್ತಾನೆ. ಮಾರನೆಯ ಬೆಳಿಗ್ಗೆಯೇ ಜವರಾಯಿ ಸತ್ತ ಸುದ್ದಿ ಬರುತ್ತದೆ. ಪ್ರೇಮ, ಕಾಮ, ಜೀವನ ಸಂಬಂಧವನ್ನು ಕುರಿತು ಜವರಾಯಿ ಬರೆದಿದ್ದ ಡೈರಿ ಕಾಳಪ್ಪನಿಗೆ ಸಿಗುತ್ತದೆ. ತನ್ನ ಅರವತ್ತನೆಯ ವಯಸ್ಸಿನಲ್ಲಿ ಪಾರ್ವತಮ್ಮಳಲ್ಲಿ ಆಕರ್ಷಿತನಾದುದು, ಅದಕ್ಕೆ ಕಾರಣವಾದ ಹೆಂಡತಿ, ಆ ನಂತರ ಸಂಸಾರ ನಿರ್ವಹಣೆ ಯಾವುದು ಎಂಬುದನ್ನು ಖಚಿತಪಡಿಸಿಕೊಳ್ಳುತ್ತಾನೆ. ಕಾಡಿ ಬೇಡಿದಳೆಂದು ತಂಗಿಗೆ ಐದುಸಾವಿರ ರೂಪಾಯಿ ಸಾಲ ಮಾಡಿಕೊಟ್ಟ ಕಾಳಪ್ಪ, ಮುಂದೆ ಸಾಲಗಾರರು ಕುತ್ತಿಗೆಪಟ್ಟಿ ಹಿಡಿದರೂ ಆತನ ತಂಗಿ ಸಾಲ ಹಿಂದಿರುಗಿಸುವುದಿಲ್ಲ. ಅಲ್ಲಿಂದ ಆತ ಸೋದರ ಸಂಬಂಧದಿಂದ ಅಷ್ಟೇ ಏಕೆ ಜೀವನದಿಂದಲೇ ನಿರ್ಲಿಪ್ತನಾಗಿರುತ್ತಾನೆ. ಸಾಕಷ್ಟು ಹಣವಿದ್ದು ಯುಕ್ತವಾದುದಕ್ಕೆ ವ್ಯಯ ಮಾಡುತ್ತಾ ಬದುಕುತ್ತಿದ್ದ ಕಾಳಪ್ಪನಿಗೆ ಅಕ್ಕ ತಿಮ್ಮು ವಂಶದ ಬೆಳವಣಿಗೆಯ ದೃಷ್ಟಿಯಿಂದಲಾದರೂ ಮದುವೆಯಾಗುವಂತೆ ಆತನನ್ನು ಒತ್ತಾಯಿಸುತ್ತಾಳೆ. ಇಳಿವಯಸ್ಸಿನಲ್ಲಿ ತನಗೆ ಮದುವೆ ಬೇಡವೆಂದು ಯೋಚಿಸಿದ ಕಾಳಪ್ಪ ತನ್ನ ಹಣವನ್ನೆಲ್ಲ ಖಗೋಳವಿಜ್ಞಾನದ ಅಭ್ಯಾಸಕ್ಕೆ ಮೀಸಲಿಟ್ಟು ಸಾರ್ಥಕತೆಯನ್ನು ಪಡೆಯಲು ನಿರ್ಧರಿಸುತ್ತಾನೆ. ಕಾಳಪ್ಪನ ಮಾತುಗಳಿಂದ ತಂದೆಯ ಶ್ರಾದ್ಧವನ್ನು ಬಹಳ ನಿಷ್ಠೆಯಿಂದ ಮಾಡುವ ಕುಮಾರ, ಒಂದು ಮಗುವಿಗೆ ಸಹಕರಿಸದಿದ್ದರೆ ಡೈವೋರ್ಸ್ ಕೊಡುವುದಾಗಿ ತನ್ನ ಹೆಂಡತಿಗೆ ಹೇಳುತ್ತಾನೆ. ಇದು ಅವನ ಸಾಂಸಾರಿಕ ಸಂಬಂಧದ ನೆಲೆಯಾದರೆ, ಅವನ ತಂಗಿ ಇಂದಿರೆ ಬೆಂಗಳೂರಿನಲ್ಲಿ ಕೆಲಸಕ್ಕೆ ಸೇರುವುದೆಂದು ನಿರ್ಧರಿಸುತ್ತಾಳೆ. ಹೀಗೆ ಒಬ್ಬೊಬ್ಬರ ಬದುಕಿನ 'ನೆಲೆ' ಸ್ಥಾಪಿತಗೊಳ್ಳುತ್ತಾ ಹೋಗುತ್ತದೆ.

ಗ್ರಹಣ – ಧರ್ಮಶಾಸ್ತ್ರ ಮತ್ತು ಸಾಂಪ್ರದಾಯಿಕ ವ್ಯವಹಾರಗಳ ನಿಜವಾದ ಅರ್ಥ ತಿಳಿಯದೆ ಇವುಗಳ ದುರ್ಮಿಶ್ರಣದಿಂದ ಉಂಟಾದ ಯಥಾರ್ಥ ಜ್ಞಾನದ ಸೋಲನ್ನು ಕುರಿತದ್ದು.

ನಿಜವಾದ ಸಂನ್ಯಾಸಿಯಾಗಿದ್ದರೂ ಲೋಕವಿರುದ್ಧವಾದ ನಡವಳಿಕೆಯಿಂದ ಭಾಸ್ಕರಾಚಾರಿ ಸಮಾಜದ ತಿರಸ್ಕಾರಕ್ಕೆ ಪಕ್ಕಾಗುತ್ತಾನೆ. ಹಿಮಗಿರೀಶ್ವರ ಕಾಲೇಜಿನ ಪ್ರಿನ್ಸಿಪಾಲರ ಪತ್ನಿ ಲಲಿತಮ್ಮ. ಅವಳು ವಿಜ್ಞಾನವನ್ನು ಓದಿದ ಪದವೀಧರೆ, ಅಧ್ಯಾಪಕಿ. ಆಕೆ ಗರ್ಭಿಣಿಯಾದಾಗ ಗ್ರಹಣ ಕಾಲದಲ್ಲಿ ಧಾರ್ಮಿಕ ವ್ರತವನ್ನು ಆಚರಿಸುತ್ತಾಳೆ. ಈ ಮೊದಲೇ ಅವರಿಬ್ಬರ ಮದುವೆಗೆ ತೀವ್ರ ವಿರೋಧವಾಗಿರುತ್ತದೆ. ಬ್ರಹ್ಮಚಾರಿಯಾಗಿದ್ದು, ವೇದಾಂತವನ್ನೋದಿಕೊಂಡ ಪ್ರಿನ್ಸಿಪಾಲರು ಲಲಿತಳನ್ನು ಮದುವೆಯಾಗುವ ವಿಚಾರ ಬಂದಾಗ ಯಜ್ಞೇಶ್ವರ ಶಾಸ್ತ್ರಿಗಳು ಅದನ್ನು ವಿರೋಧಿಸುತ್ತಾರೆ. ಗ್ರಹಣ ಬಂದಾಗ ಅದನ್ನು ಧಾರ್ಮಿಕವಾಗಿ ಆಚರಿಸದ ಸ್ವಾಮಿಗಳು ಮುಂದೆ ಡಾ. ಸರೋಜಳನ್ನು ಮದುವೆಯಾಗುವೆನೆಂದು ಹೇಳುತ್ತಾರೆ. ಆಗ 'ಗ್ರಹಣ' ದ ಪರಿಣಾಮವಾಗಿ ಸ್ವಾಮಿಗಳಿಗೆ ಬುದ್ಧಿಭ್ರಮಣೆಯಾಗಿದೆ ಎಂಬ ನಂಬಿಕೆ ಹುಟ್ಟಿಕೊಳ್ಳುತ್ತದೆ. 'ಗ್ರಹಣ'ವನ್ನು ಧಾರ್ಮಿಕವಾಗಿ ಆಚರಿಸಿದ ಲಲಿತಮ್ಮನಿಗೆ ಗರ್ಭಧಾರಣವೇ ಆಗಿರುವುದಿಲ್ಲ. ಮುಂದೆ ಸರೋಜಮ್ಮಳು ಸ್ವಾಮಿಯನ್ನು ಮದುವೆ ಮಾಡಿಕೊಳ್ಳಲು ಒಪ್ಪುವುದಿಲ್ಲ. ಸ್ವಾಮಿಗಳು ಆಕೆಗೆ ಒದ್ದು ಹೋಗುತ್ತಾರೆ. ತೋರಿಕೆ—ವಾಸ್ತವತೆ, ಸಂಪ್ರದಾಯ—ಹೊಸದೃಷ್ಟಿ ಸತ್ಯ—ಅಸತ್ಯಗಳ ನೈಜ ನಿರೂಪಣೆಯೇ ಈ ಕಾದಂಬರಿಯ ವಸ್ತು. ಸಂಸಾರ ಮತ್ತು ಸಂನ್ಯಾಸ ಪರಸ್ಪರ ವಿರುದ್ಧವೆಂಬುದು ಧಾರ್ಮಿಕ ನಂಬಿಕೆ. ಸಂನ್ಯಾಸಿಯು ಸಂಸಾರಸ್ಥನಾಗ ಹೊರಟರೆ ಏನೆಲ್ಲ ಆಗುತ್ತದೆಂಬುದಕ್ಕೆ ಗ್ರಹಣ ಒಂದು ನೆಪವಾಗುತ್ತದೆ.

**ದಾಟು** – ಸಾಮಾಜಿಕ ವ್ಯವಸ್ಥೆಯ ಅನೇಕ ಜಟಿಲ ಅಂಶಗಳನ್ನು ಒಳಗೊಂಡ ಕೃತಿ. ಜಾತಿ ವ್ಯವಸ್ಥೆಯ ಸಮಸ್ಯೆ, ಅಂತರ್ಜಾತೀಯ ವಿವಾಹ ಸಮಸ್ಯೆ, ಹರಿಜನ ಸಮಸ್ಯೆಗಳು ಪ್ರಸ್ತುತ ಸಮಾಜದಲ್ಲಿ ಹೇಗಿವೆ ಎಂಬುದನ್ನು ಈ ಕೃತಿ ಸಾದರಪಡಿಸುತ್ತದೆ. ಪುರಾಣ, ಸಮಾಜಶಾಸ್ತ್ರ, ಜಾನಪದ, ಧರ್ಮ, ತತ್ತ್ವ, ಸಮಕಾಲೀನತೆ – ಈ ಅಂಶಗಳು ಕಥೆಯ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ವೆಂಕಟರಮಣಯ್ಯ ಊರಿನ ಅರ್ಚಕ. ಅವನ ಮಕ್ಕಳಾದ ವೆಂಕಟೇಶ ಮತ್ತು ಸತ್ಯಭಾಮ ಪರಸ್ಪರ ವಿರುದ್ಧ ವ್ಯಕ್ತಿತ್ವವುಳ್ಳವರು. ಸತ್ಯಭಾಮ ಜಾತಿ, ಮತ ಸುಳ್ಳು ಎಂದು ಹೇಳಿ ಶೂದ್ರನಾದ ಶ್ರೀನಿವಾಸನನ್ನು ಮದುವೆಯಾಗಲು ಇಚ್ಛಿಸುತ್ತಾಳೆ. ಇದು ಧರ್ಮಶ್ರದ್ಧೆಯುಳ್ಳ ವೆಂಕಟರಮಣಯ್ಯನವರಿಗೆ ಇಷ್ಟವಾಗದೆ ಅವಳಿಗೆ ಚಪ್ಪಲಿಯಿಂದ ಹೊಡೆಯುತ್ತಾರೆ. ಅತ್ತ ಶ್ರೀನಿವಾಸನಾದರೋ ತಂದೆಯ ಮಾತುಗಳಿಗೆ ವಿರುದ್ಧವಾಗಲಾರದೆ ಸತ್ಯಳನ್ನು ಮದುವೆಯಾಗಲು ಹಿಂಜರಿಯುತ್ತಾನೆ. ಇತ್ತ ತಂದೆ ವೆಂಕಟರಮಣಯ್ಯ ಹರಿಜನ ಕನ್ಯೆಯೊಂದಿಗೆ ಸಂಬಂಧ ಬೆಳೆಸುತ್ತಾರೆ. ಪಾಪಪ್ರಜ್ಞೆ ಜಾಗೃತವಾಗಿ ಅವರು ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ. ಮೋಹನದಾಸನೇ ಇದಕ್ಕೆ ಕಾರಣನಾಗಬೇಕಾಗುತ್ತದೆ. ಏಕೆಂದರೆ ಈ ಸಂಬಂಧ ಕುರಿತು ಅವನು ವೆಂಕಟರಮಣಯ್ಯನೊಡನೆ ಜಗಳವಾಡುತ್ತಾನೆ. ಮೇಲ್ಜಾತಿಯವರ ದೌರ್ಜನ್ಯದ ವಿರುದ್ಧ ಹೋರಾಡುವುದಕ್ಕಾಗಿ ಸತ್ಯಭಾಮೆ ಮೋಹನದಾಸನನ್ನು ಬೆಂಬಲಿಸುತ್ತಾಳೆ. ಅವನಿಗೆ ಒಂದು ಪುಸ್ತಕವನ್ನು ಬರೆದುಕೊಡುತ್ತಾಳೆ. ಅಷ್ಟೇ ಅಲ್ಲ ಅವನ ಧೈರ್ಯ ಛಲಕ್ಕೆ ಮೆಚ್ಚಿ ಅವನನ್ನು ಮದುವೆಯಾಗಲು ಮುಂದಾಗುತ್ತಾಳೆ. ಅನಂತರ ಮೋಹನದಾಸ ಹರಿಜನರನ್ನೆಲ್ಲ ಕರೆದುಕೊಂಡು ಊರಿನ ದೇವಾಲಯ ಪ್ರವೇಶ ಮಾಡಲು ಪ್ರಯತ್ನಿಸುತ್ತಾನೆ. ಆದರೆ ಒಮ್ಮೆಲೆ ಆ ಪ್ರಖರತೆಯಿಂದ ತಲೆತಿರುಗಿ ಬಿದ್ದ ಕಾರಣ ಅವನ ಹಿಂದೆ

ಬಂದಿದ್ದ ಹರಿಜನರು ಒಳಹೋಗಲು ಹೆದರುತ್ತಾರೆ. ಮದುವೆ, ದೇವಾಲಯ ಪ್ರವೇಶ ಯಾವುದೂ ಸಾಧ್ಯವಾಗುವುದಿಲ್ಲ. ಈ ನಿರ್ಬಂಧಗಳನ್ನು ದಾಟಲು ಮೋಹನದಾಸ ಕೊನೆಗೆ ಊರಿನ ಕೆರೆಗೆ ಡೈನಾಮೆಟ್ ಇಟ್ಟು ಸಿಡಿಸುತ್ತಾನೆ. ಊರೆಲ್ಲ ನೀರಿನಲ್ಲಿ ಮುಳುಗಿ ಮೋಹನದಾಸನೂ ಅದರಲ್ಲಿ ಸಾಯುತ್ತಾನೆ. ಸತ್ಯಭಾಮೆ ಬ್ರಾಹ್ಮಣಿಕೆಯ ಜನಿವಾರವನ್ನು ಕಿತ್ತು ಬಿಸುಟು ಉಳಿಯುತ್ತಾಳೆ.

ಸಾಕ್ಷಿ – ಮನುಷ್ಯನ ಅಂತರಂಗದ ಅನೇಕ ಅಂಶಗಳನ್ನು ಬಿಚ್ಚಿ ತೋರಿಸುವುದಾಗಿದೆ. ಮನುಷ್ಯರ ನೀತಿಯ ನೆಲೆಯಲ್ಲಿ 'ನಿಜ ಮತ್ತು ಸುಳ್ಳು' ಎರಡರ ಅಂತರ ಎಷ್ಟೆಂಬುದರ ಚಿತ್ರಣ. ಕಂಬಿಯ ಕೊಲೆ ಸಂಬಂಧದಲ್ಲಿ ಅಳಿಯ ಮಂಜಯ್ಯನ ಪರವಾಗಿ ಸುಳ್ಳು ಸಾಕ್ಷಿ ಹೇಳಿದ ಪರಮೇಶ್ವರಯ್ಯ ಅದೇ ವೇದನೆಯಿಂದ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಯಮಲೋಕದಲ್ಲಿ ಪ್ರೇತವಾಗಿದ್ದ ಪರಮೇಶ್ವರಯ್ಯ ಇಷ್ಟಕ್ಕೆಲ್ಲ ತಾನೇ ಕಾರಣವೆಂದು ಒಪ್ಪಿಕೊಳ್ಳುತ್ತಾನೆ. ಆಗ ಅದರ ನೈಜ ಸ್ವರೂಪವನ್ನು ಕಾಣಲು ಒಂದು ನಿರ್ಬಂಧದ ಮೂಲಕ ಅವನನ್ನು ಭೂಲೋಕಕ್ಕೆ ಕಳಿಸಲಾಗುತ್ತದೆ. ಅದೇನೆಂದರೆ "ಪ್ರೇತ ಸ್ಥಿತಿಯಲ್ಲೇ ನಿನ್ನನ್ನು ನಿನ್ನ ಪೂರ್ವಲೋಕಕ್ಕೆ ಕಳಿಸುತ್ತೇವೆ. ಅಲ್ಲಿ ಯಾರ ಮನಸ್ಸನ್ನು ಬೇಕಾದರೂ ನೀನು ಪ್ರವೇಶಿಸಬಹುದು. ಏಕಕಾಲದಲ್ಲಿ ಹಲವರ ಮನಸ್ಸನ್ನು ಹೊಕ್ಕು ನೋಡಬಹುದು. ಆದರೆ ಯಾರ ಮನಸ್ಸು ಭಾವಗಳನ್ನೂ ಪ್ರಭಾವಿಸುವ ಪರಿವರ್ತಿಸುವ ಶಕ್ತಿ ನಿನಗಿರುವುದಿಲ್ಲ. ಅರಿಯುವುದಷ್ಟೆ ಸಾಕ್ಷಿಯ ಶಕ್ತಿ" (೩೩–೩೪) ಸಾಕ್ಷಿಪ್ರಜ್ಞೆಯಾಗಿ ಬಂದ ಆತ ಅಳಿಯಂದಿರಾದ ಸತ್ಯನಾರಾಯಣಪ್ಪ, ಮಂಜಯ್ಯ, ಮಗಳು ಸಾವಿತ್ರಿ, ಮಗ ರಾಮಕೃಷ್ಣ, ಸೊಸೆ ಸುಕನ್ಯೆ, ಅವಳ ಮಗ ಗಣೇಶ, ಬೀಗ ನಾಗಪ್ಪ ಎಲ್ಲರ ಮನಸ್ಸನ್ನೂ ಸಮೀಕ್ಷಿಸುತ್ತಾನೆ. ಸ್ವತಃ ತನ್ನ ಪತ್ನಿಯೇ ಮಂಜಯ್ಯನೊಂದಿಗೆ ಸಂಬಂಧ ಹೊಂದಿದ್ದರೂ ಒಂದೂ ಕಟು ಮಾತನಾಡದ ಪರಮೇಶ್ವರಯ್ಯ ಸತ್ಯದ ಪ್ರತೀಕವಾದರೆ, ಸ್ವೇಚ್ಛಾಚಾರಿ ಮಂಜಯ್ಯ ಸುಳ್ಳಿನ ಪ್ರತೀಕ. ಮಂಜಯ್ಯ ಹೋದೆಡೆಯಲ್ಲೆಲ್ಲ ಸಾತ್ವಿಕತೆ ಏರುಪೇರಾಗುತ್ತದೆ. ಇದನ್ನೆಲ್ಲ ಸಮೀಕ್ಷಿಸುವ ಪರಮೇಶ್ವರಯ್ಯ ಮಂಜಯ್ಯನ ಸಾವಿನೊಂದಿಗೆ ಪ್ರೇತಲೋಕಕ್ಕೆ ಮರಳುತ್ತಾನೆ. ಅಲ್ಲಿ ಅವನ ಪತ್ನಿ ಮಂಜಯ್ಯನಿಗೆ ಮರುಳಾದುದರ ವಿಚಾರ ತಿಳಿಯುತ್ತದೆ. ಸಾಕ್ಷಿಯಾಗಿ ನಿಂತು ನೋಡುವ ಆತನಿಗೆ ಬದುಕಿನ ಎರಡು ಅಂತರಗಳ ಸ್ಪಷ್ಟ ಅರಿವಾಗುತ್ತದೆ. ಪುರಾಣ ಮತ್ತು ವಾಸ್ತವ ಜಗತ್ತುಗಳೆರಡನ್ನೂ ಒಂದೆಡೆ ಜೋಡಿಸುವ ಕಾದಂಬರಿ ಇದು. 'ನಿಜವು ನೀತಿಯ ನೆಲೆಯೋ, ನೀತಿಯು ನಿಜದ ನೆಲೆಯೋ' ಎಂಬುದನ್ನು ಗಂಭೀರವಾಗಿ ವಿವರಿಸುತ್ತದೆ.

ಅಂಚು – ಜೀವನಪ್ರೀತಿ ಮತ್ತು ಸಾವಿನ ಪ್ರಪಾತಗಳ ಅಂಚಿನಲ್ಲಿ ನಿಂತ ಅಮೃತಾಳ ಕಥೆ. ತನ್ನವರು ತನಗೆ ಮಾಡಿರುವ ಅನ್ಯಾಯಗಳನ್ನು ಪ್ರತಿಭಟಿಸಲಾಗದ ಅಮೃತ ತನ್ನನ್ನು ಪ್ರೀತಿಸುತ್ತಿದ್ದವರ ಮೇಲೆಯೇ ಕೋಪಗೊಳ್ಳುತ್ತಾಳೆ. ಇದೊಂದು ಬಗೆಯ ವಿಕೃತ ಮನಸ್ಸು. ಅವಳು ಮತ್ತೆ ಮತ್ತೆ ಆತ್ಮಹತ್ಯೆಗೆ ಪ್ರಯತ್ನಿಸುತ್ತಾಳೆ. ಆದರೆ ಮಕ್ಕಳ ಮೇಲಿನ ವ್ಯಾಮೋಹದಿಂದ ವಾಪಸ್ಸು ಬರುತ್ತಾಳೆ. ವಾಸ್ತುಶಿಲ್ಪದ ವಿನ್ಯಾಸಕಾರ ಸೋಮಶೇಖರ್ ಅವಳನ್ನು ಪ್ರೀತಿಸುತ್ತಾನೆ. ಅವಳೂ ಅವನನ್ನು ಪ್ರೀತಿಸುವಷ್ಟೇ ಪ್ರಮಾಣದಲ್ಲಿ ಜಗಳಕಾಯುತ್ತಾಳೆ, ದ್ವೇಷಿಸುತ್ತಾಳೆ. ಇಷ್ಟಕ್ಕೆಲ್ಲ ಕಾರಣ ಅವಳ

ಚಿಕ್ಕಮ್ಮ ಅವಳಿಗೆ ಮಾಡಿದ್ದ ಅನ್ಯಾಯ. ಅಮೃತಾಳ ತಾಯಿ ತೀರಿಕೊಂಡ ಮೇಲೆ ಮನೆಯವರ ಸಹಾಯಕ್ಕೆ ನಿಲ್ಲುವ ನೆಪದಿಂದ ಬಂದ ಆಕೆ ಕ್ರಮೇಣ ಆಸ್ತಿಯ ಸರ್ವ ನಿರ್ವಹಣೆಯನ್ನೂ ಮಾಡುತ್ತಾಳೆ. ಒಳಗೊಳಗೇ ಹಣ ಮಾಡಿಕೊಂಡು ಮಕ್ಕಳಿಗಾಗಿ ಆಸ್ತಿ ಖರೀದಿಸುತ್ತಾಳೆ. ಅಮೃತಾಳನ್ನು ತನ್ನ ತಮ್ಮನಿಗೆ ಕೊಟ್ಟು ಮದುವೆ ಮಾಡಿಸುತ್ತಾಳೆ. ಮೊದಮೊದಲು ತನಗೆ ಒಳ್ಳೆಯದಕ್ಕೆ ಹೀಗೆ ಮಾಡಿದಳೆಂದು ತಿಳಿದುಕೊಂಡಿದ್ದ ಅಮೃತಾಳಿಗೆ ಕ್ರಮೇಣ ಅದು ಅಲ್ಲವೆಂದು ಗೊತ್ತಾಗುತ್ತದೆ. ಆದ್ದರಿಂದ ಗಂಡನಿಂದ ದೂರವಾಗಿ ಮೈಸೂರಿನ ಕಾಲೇಜೊಂದರಲ್ಲಿ ಅಧ್ಯಾಪಕಿಯಾಗುತ್ತಾಳೆ. ಆದರೆ ಅವಳು ಈ ಅನ್ಯಾಯದ ಪೀಡನೆಯಿಂದ ತಪ್ಪಿಸಿಕೊಳ್ಳಲಾಗುವುದಿಲ್ಲ. ಇದರಿಂದ ಸೋಮಶೇಖರನೂ ನೋವಿಗೀಡಾಗುತ್ತಾನೆ. ಕೊನೆಗೆ ಸೋಮಶೇಖರನ ಮಾತಿನಂತೆ ತನ್ನ ಚಿಕ್ಕಮ್ಮ ತಮ್ಮ ಹಣದಿಂದ ಖರೀದಿಸಿದ್ದ ಆಸ್ತಿಯ ವಿಚಾರವಾಗಿ ಕೋರ್ಟಿಗೆ ಹೋಗುತ್ತಾಳೆ. ಗಂಡ ರಂಗಣ್ಣನಿಗೆ ಡೈವೋರ್ಸ್ ಕೊಡುತ್ತಾಳೆ. ಚಿಕ್ಕಮ್ಮನನ್ನು ಕುಳ್ಳಿರಿಸಿಕೊಂಡು ಒಂದು ಒಪ್ಪಂದಕ್ಕೆ ಬಂದು ತನ್ನ ಸಂಪೂರ್ಣ ಆಸ್ತಿಯಲ್ಲಿ ತನ್ನ ಪಾಲಿನದನ್ನು ಜಯಣ್ಣ ಮತ್ತು ಕಿಟ್ಟಣ್ಣರಿಗೆ ದಾನ ಮಾಡುವುದಾಗಿ ಹೇಳುತ್ತಾಳೆ. ಸೋಮಶೇಖರನ ಅನಿಸಿಕೆಯಂತೆ ವಾಸ್ತುಶಿಲ್ಪದ ಅಧ್ಯಯನಕ್ಕೆಂದು ಮುಂಬಯಿಗೆ ಹೋಗುತ್ತಾಳೆ. ಸದಾ ಸಾವಿನ ಅಂಚಿನಲ್ಲೇ ಸುಳಿದಾಡುತ್ತಿದ್ದ ಅಮೃತ ಈ ಮೂಲಕ ಪುನಃ ಹೊಸ ಬದುಕನ್ನು ಕಾಣುತ್ತಾಳೆ.

**ಅನ್ವೇಷಣ** – ಗೃಹಭಂಗದ ಮುಂದಿನ ಕಥೆ. ಕಾದಂಬರಿಯ ಕೊನೆಯಲ್ಲಿ ಉಳಿದ ನಂಜಮ್ಮನ ಏಕೈಕ ಹುಡುಗ ವಿಶ್ವನಾಥ ಮಾದೇವಯ್ಯನವರ ಜೊತೆಗೆ ಹಳ್ಳಿಯಿಂದ ಬೇರೆ ಕಡೆ ಹೋಗುತ್ತಾನೆ. ಅವನು ಏನಾದ ಎಂಬುದರ ಕಥನವೇ ಈ ಕೃತಿ. ಬೆನ್ನು ಕುರುವಿನಿಂದ ನರಳುತ್ತಿದ್ದ ಕಂಠೀಜೋಯಿಸರಿಂದ ಮೊಮ್ಮಗನ ಹುಡುಕಾಟದೊಂದಿಗೆ ಕೃತಿಯು ಆರಂಭವಾಗುತ್ತದೆ. ವಿಶ್ವನಾಥನನ್ನು ಕಂಠಿಜೋಯಿಸರಂತೆ ಸುನಂದೆಯೇ ಮೊದಲಾಗಿ ಹತ್ತಾರು ಜನರು ಹುಡುಕುತ್ತಾರೆ. ಪ್ರತಿಯೊಬ್ಬರಿಗೂ ಆತ ಒಂದೊಂದು ರೀತಿಯಲ್ಲಿ ಕಾಣುತ್ತಾನೆ. ಆದರೆ ಆತನ ಮೂಲಕ ಕಾಣುವುದು ಬದುಕನ್ನೇ ಹೊರತು ಅವನನ್ನಲ್ಲ. ಗಂಡು – ಹೆಣ್ಣಿನ ಸಂಬಂಧ, ಸಾವನ್ನು ಮೆಟ್ಟನಿಂತು ಬದುಕನ್ನು ಸಾಧಿಸಬೇಕೆಂಬ ದೃಷ್ಟಿ– ಈ ಎಲ್ಲವನ್ನು ಕಾದಂಬರಿ ಹೇಳುತ್ತದೆ. ವಿಶ್ವನಾಥ ಎಲ್ಲರಿಂದಲೂ ದೂರವಾಗುತ್ತಾನೆ. ಕೊನೆಗೆ ಹೆಂಡತಿ ಸುನಂದೆಯೂ ಅವನು ಕರೆದಾಗ ಹೋಗುವುದಿಲ್ಲ.

**ಪರ್ವ** – ಮಹಾಭಾರತದ ಮಾನವಶಾಸ್ತ್ರೀಯ ಅಧ್ಯಯನ. ಮಹಾಭಾರತದ ಅಲೌಕಿಕ ದೃಷ್ಟಿಕೋನವನ್ನು ಬಿಟ್ಟು ಸಾಮಾನ್ಯರನ್ನೂ, ಅಸಾಮಾನ್ಯರನ್ನೂ ಒಂದೇ ದೃಷ್ಟಿಕೋನದಿಂದ ವಿವರಿಸುವ ಕಾದಂಬರಿ. ಮಾನವ ಜನಾಂಗದ ಬಗ್ಗೆ ಗಂಭೀರವಾಗಿ ಅಭ್ಯಸಿಸಿರುವ ಲೇಖಕರು ಜೀವನಮೌಲ್ಯಗಳ ನಿರಂತರತೆಯನ್ನು ಗುರುತಿಸಿದ್ದಾರೆ. ಮಾನವನ ಅನುಭವದ ವಿವಿಧ ಮುಖ, ರೂಪ, ಸಂಬಂಧ, ಸ್ವರೂಪ ಮತ್ತು ವಿವೇಚನೆಗಳು ಇಲ್ಲಿ ನಿರೂಪಿತವಾಗಿವೆ. 'ಪರ್ವ' ಮಹಾಭಾರತದ ಕತೆಯನ್ನು ಸಮಗ್ರ ಕಾಲ, ದೇಶವನ್ನು ಒಳಗೊಂಡು ಹೇಳುತ್ತಾ ಹೋಗುತ್ತದೆ. ಶ್ರೀಕೃಷ್ಣನನ್ನೂ ಒಳಗೊಂಡಂತೆ ಕೃತಿಯ ಉಳಿದೆಲ್ಲ ಪಾತ್ರಗಳೂ ಇಲ್ಲಿ ಗಂಭೀರವಾಗಿವೆ. ಹುಟ್ಟು–ಸಾವು, ಸ್ನೇಹ–ದ್ವೇಷ, ಕಾಮ–ಪ್ರೇಮ ಇವು ಮನುಷ್ಯ ಬದುಕಿನ ಮುಖ್ಯ ಅಂಗಗಳು. ದ್ರೌಪದಿ,

ಕುಂತಿ, ಮಾದ್ರಿ ಮತ್ತು ಗಾಂಧಾರಿಯರು ಮಹಾಭಾರತದ ಪ್ರಮುಖ ಸ್ತ್ರೀಯರು. ಅವರ ಮೂಲಕ ಪಾಂಡವ–ಕೌರವರ ಕಥೆ ಹೊಸ ಬಗೆಯಲ್ಲಿ ರೂಪುಗೊಂಡಿದೆ. ಇದೊಂದು ಸೃಜನಾತ್ಮಕ ಪ್ರತಿಕ್ರಿಯೆ.

ತಂತು – ಭೈರಪ್ಪನವರ ಇತ್ತೀಚಿನ ಕಾದಂಬರಿ. ಬಂಡವಾಳಶಾಹಿ ಮತ್ತು ರಾಜಕೀಯ ಹಿಡಿತವುಳ್ಳ ವ್ಯವಸ್ಥೆಯಲ್ಲಿ ಪ್ರಾಮಾಣಿಕತೆ ಮತ್ತು ಸೇವಾಮನೋಭಾವ ಎಂಥ ತೊಂದರೆಗೆ ಒಳಗಾಗಿದೆ ಎಂಬುದನ್ನು ವಿವರಿಸುತ್ತದೆ. ಎಪ್ಪತ್ತರ ದಶಕದ ಈ ಕಥೆ, ತುರ್ತುಪರಿಸ್ಥಿತಿಯವರೆಗೆ ವ್ಯಾಪಿಸಿದೆ. ಬಸವನಪುರದ ಚೆನ್ನಕೇಶವ ದೇವಾಲಯದ ವಿಗ್ರಹವೊಂದು ಕಳುವಾಗುತ್ತದೆ. ಅದನ್ನು ಕುರಿತು ಒಂದು ಲೇಖನ ಬರೆದ ಪತ್ರಕರ್ತ ರವೀಂದ್ರ ಅದರ ಎಳೆಗಳನ್ನು ಅರಿಯುತ್ತಾ ಹೋದಂತೆಲ್ಲಾ ಅದರ ಜಾಲ ಎಷ್ಟು ಆಳವಾಗಿದೆ ಎಂಬುದು ಕಾಣುತ್ತಾನೆ. ಗ್ರಾನೈಟ್ ಕಲ್ಲುಗಳನ್ನು ಕದ್ದು ಮಾರುವುದು, ಜನರನ್ನು ಮೃಗಗಳಂತೆ ದುಡಿಸಿಕೊಳ್ಳುವುದು ಇತ್ಯಾದಿ ಎಲ್ಲವನ್ನು ಆಧಾರ ಸಮೇತ ಪ್ರಕಟಿಸುತ್ತಾನೆ. ಆದರೆ ಅವನ ಹೆಂಡತಿ ಕಾಂತಿ ಮತ್ತು ಮಗ ಅನೂಪ ಇಬ್ಬರದೂ ಒಂದು ರೀತಿಯ ಲೋಲುಪ ಬದುಕು. ಹಣಮಯ ಬದುಕಿಗೆ ಮನಸೋತ ಕಾಂತಿ ಗಂಡನಿಂದ ದೂರವಾಗಿ ದೆಹಲಿಯಲ್ಲಿ ವ್ಯಾಪಾರ ಆರಂಭಿಸುತ್ತಾಳೆ. ವ್ಯಾಪಾರದಲ್ಲಿ ಅಪಾರ ಲಾಭಗಳಿಸುತ್ತಾಳೆ. ಅಲ್ಲಿಂದ ಅವಳು ಅನುಸರಿಸುವ ಬದುಕಿನ ಮಾರ್ಗ ವಿಕೃತವಾದುದು. ಅವಳ ಸುಖಾಕಾಂಕ್ಷೆಯ ಬದುಕು ಹೊನ್ನತ್ತಿಯಂಥ ಸಂಗೀತ ಸಾಧಕನನ್ನು ಅಪಮಾರ್ಗಗೊಳಿಸುತ್ತದೆ. ಇತ್ತ ಗಾಂಧಿಶಾಲೆಯಲ್ಲಿ ಓದಿ ವಿಶೇಷ ಗುಣ ಬೆಳೆಸಿಕೊಂಡಿದ್ದ ಅನೂಪ ಇಂಜಿನಿಯರಿಂಗ್ ಶಿಕ್ಷಣಕ್ಕೆ ಸೇರಿದ ಮೇಲೆ ವಿಷಯಲಂಪಟನಾಗುತ್ತಾನೆ. ತಂದೆ, ತಾಯಿಯರಿಬ್ಬರಿಂದಲೂ ಹಣ ತರಿಸಿಕೊಂಡು ಮೋಜು ಮಾಡುತ್ತಾನೆ. ಇಂಜಿನಿಯರಿಂಗ್ ಮುಗಿದ ಮೇಲೆ ಹೆಚ್ಚಿನ ಓದಿಗೆಂದು ಅಮೇರಿಕಾಕ್ಕೆ ಹೋದ ಆತ ತಂದೆ, ತಾಯಿಯರಿಂದಲೂ ದೂರವಾಗುತ್ತಾನೆ. ಅಪ್ಪಟ ವ್ಯಾಪಾರಿ ಮನೋಭಾವದವನಾಗುತ್ತಾನೆ.

ಈ ಕಾದಂಬರಿ ಸಾಮಾಜಿಕ ಮುಖಗಳಂತೆ ರಾಜಕೀಯ ಮುಖವನ್ನು ವಿವರಿಸುತ್ತದೆ. ಅಣ್ಣಯ್ಯಗೌಡ ಗಾಂಧಿಶಾಲೆ ಆರಂಭಿಸಿ ನಡೆಸುತ್ತಿರುತ್ತಾನೆ. ತನ್ನಜ್ಜನ ಫಲವತ್ತಾದ ಆಸ್ತಿಯನ್ನು ಹಿಂತಿರುಗಿ ಪಡೆಯಲು ಶಿವರಾಮೇಗೌಡ ರಾಜಕೀಯ ತೊಂದರೆಗಳನ್ನು ಕೊಡುತ್ತಾನೆ. ಅವನಿಂದ ತಪ್ಪಿಸಿಕೊಳ್ಳಲು ಅಣ್ಣಯ್ಯಗೌಡ ರವೀಂದ್ರನ ಸಲಹೆಯಂತೆ ವಕೀಲ ಪಾಟೀಲರನ್ನು ಸಮಿತಿಯ ಅಧ್ಯಕ್ಷರನ್ನಾಗಿ ಮಾಡುತ್ತಾನೆ. ಆದರೆ ಪಾಟೀಲರು ಕ್ರಮೇಣ ಈ ಸರಳವಾಗಿದ್ದ ಶಾಲೆಯನ್ನು ಬಂಡವಾಳಶಾಹಿ ಸಂಸ್ಥೆಯನ್ನಾಗಿ ಬದಲಾಯಿಸುತ್ತಾರೆ. ಸೇವಾಮನೋಭಾವದ ಅಣ್ಣಯ್ಯಗೌಡರೊಂದಿಗೆ ಅನೇಕ ಪ್ರಾಮಾಣಿಕರು ಹೊರಹೋಗ ಬೇಕಾಗುತ್ತದೆ. ರವೀಂದ್ರ ಕೆಲಸ ಮಾಡುತ್ತಿದ್ದ ಟ್ರಿಬ್ಯೂನಲ್ ಪತ್ರಿಕೆಯ ಮಾಲೀಕರು ಕ್ರಮೇಣ ಆಳುವ ಪಕ್ಷದೊಂದಿಗೆ ಒಪ್ಪಂದ ಮಾಡಿಕೊಂಡುದರ ಪರಿಣಾಮ ರವೀಂದ್ರ ಸಂಪಾದಕ ಹುದ್ದೆಗೆ ರಾಜೀನಾಮೆ ನೀಡಿ ಹೊರಬರುತ್ತಾನೆ. ಒಂದೆಡೆ ಬಂಡವಾಳಶಾಹಿ ವ್ಯವಸ್ಥೆ ಮತ್ತೊಂದೆಡೆ ಭ್ರಷ್ಟ ರಾಜಕೀಯ – ಈ ಎರಡರಿಂದ ಪ್ರಾಮಾಣಿಕರೆಲ್ಲ ತೊಂದರೆಗೊಳಗಾಗುತ್ತಾರೆ. ಏನೂ ತಪ್ಪುಮಾಡದ ಚೆನ್ನಕೇಶವ ದೇವಾಲಯದ ಅರ್ಚಕ ರಾಮಭಟ್ಟರು ಕೂಡ ತುರ್ತುಪರಿಸ್ಥಿತಿಯ ಹೆಸರಿನಲ್ಲಿ ಜೈಲು ಸೇರಿ ಪ್ರಾಣಬಿಡುತ್ತಾರೆ. ರವೀಂದ್ರನನ್ನು ಒಳಗೊಂಡಂತೆ ಹೊನ್ನತ್ತಿ, ಅಣ್ಣಯ್ಯಗೌಡ ಮೊದಲಾದ ಪ್ರಾಮಾಣಿಕರೆಲ್ಲ ಜೈಲು ಸೇರುತ್ತಾರೆ.

# ಭೈರಪ್ಪನವರ ಕೃತಿಗಳು : ವಿಮರ್ಶಾ ದೃಷ್ಟಿಕೋನ

ಭೈರಪ್ಪನವರ ಕಾದಂಬರಿಗಳನ್ನು ಕುರಿತು 'ಸಹಸ್ಪಂದನ', 'ಪರ್ವ: ಒಂದು ಸಮೀಕ್ಷೆ', 'ಭೈರಪ್ಪಾಭಿನಂದನಾ' ಮತ್ತು 'ಭೈರಪ್ಪನವರ ಕಾದಂಬರಿಗಳ ಸ್ವರೂಪ' ಎಂಬ ನಾಲ್ಕು ಕೃತಿಗಳು ಪ್ರಕಟವಾಗಿವೆ. ಅಲ್ಲದೆ ಅವರ ಕೃತಿಗಳ ಬಗ್ಗೆ ನೂರಾರು ಲೇಖನಗಳು ವಿವಿಧ ಕೃತಿಗಳಲ್ಲಿ ಮತ್ತು ನಿಯತಕಾಲಿಕೆಗಳಲ್ಲಿ ಪ್ರಕಟವಾಗಿವೆ. ಅವರ ಕೃತಿಗಳು ಭಾರತದ ಬೇರೆ ಬೇರೆ ಭಾಷೆಗಳಿಗೆ ತರ್ಜುಮೆಗೊಂಡಿರುವಂತೆಯೇ, ಆ ಕುರಿತು ಅನೇಕ ಭಾಷೆಗಳಲ್ಲಿ ಲೇಖನಗಳೂ ಬಂದಿವೆ. 'ಅಖಿಲ ಭಾರತ ವ್ಯಾಪ್ತಿಯಲ್ಲಿ ಅತ್ಯಂತ ಹೆಚ್ಚು ಓದುಗರನ್ನು ಪಡೆದ ಲೇಖಕರು ಭೈರಪ್ಪ' ಎಂಬುದು ಸತ್ಯವಾಗಿದೆ. ಅವರ ಕೃತಿಗಳನ್ನು ಕುರಿತು ಎರಡು ನೆಲೆಯಿಂದ ವಿಮರ್ಶಿಸಲಾಗಿದೆ. ೧. ಸಂಕೀರ್ಣ ಜಗತ್ತಿನ ಒಂದು ಆದರ್ಶ ಸೃಷ್ಟಿ ಇವರ ಕೃತಿಗಳು. ೨. ಸಿಗರೇಟು ಸೇದುವುದು ಆರೋಗ್ಯಕ್ಕೆ ಹಾನಿಕರ ಎಂದು ಅದರ ಪ್ಯಾಕಿನ ಮೇಲೆ ಹಾಕುವಂತೆ ಇವರ ಕಾದಂಬರಿಗಳ ಮೇಲೂ ಹಾಕಬೇಕು. ಇವೆರಡೂ ಪರಸ್ಪರ ವೈರುಧ್ಯಮಯ ಹೇಳಿಕೆಗಳು. ಆದರೆ ಗಂಭೀರ ಲೇಖಕನೊಬ್ಬನ ಕೃತಿಗಳ ವಿಶಿಷ್ಟ ಅಧ್ಯಯನವನ್ನೂ ಇವು ಧ್ವನಿಸುತ್ತವೆ.

ಭೈರಪ್ಪನವರು ತಮ್ಮ ಕೃತಿಗಳಲ್ಲಿ 'ಅನುಭವ'ಕ್ಕೆ ಹೆಚ್ಚು ಮಹತ್ವ ಕೊಟ್ಟಿದ್ದಾರೆ. ಹಾಗಾಗಿ ಇವರಲ್ಲಿ ಜೀವನಮೌಲ್ಯಗಳ ಬಗ್ಗೆ ತೀವ್ರ ಕಾಳಜಿ ಮತ್ತು ಆಯ್ಕೆಯ ಸಮಸ್ಯೆಯ ಗೊಂದಲಗಳು ಕಂಡು ಬರುತ್ತವೆ. ಧರ್ಮ, ವಂಶಪ್ರಜ್ಞೆ, ಸಂಸ್ಕೃತಿ, ಪುನರ್ಜನ್ಮ, ಸಂನ್ಯಾಸ ಮತ್ತು ಸಂಸಾರ– ಈ ಅಂಶಗಳನ್ನು ಮಾನವೀಯತೆ, ಸೇವೆ ಮತ್ತು ಪ್ರಾಮಾಣಿಕತೆಯ ಹಿನ್ನೆಲೆಯಿಂದ ಚರ್ಚಿಸುತ್ತಾರೆ. ಸ್ವಾತಂತ್ರ್ಯೋತ್ತರ ಕಾಲದ ಸಾಮಾಜಿಕಬದುಕಿನ ಅನೇಕ ಗೊಂದಲಗಳು,ಭ್ರಷ್ಟತೆಯ ಮುಖಗಳನ್ನು ಇವರು ವಿಶೇಷವಾಗಿ ಗಮನಿಸಿದ್ದಾರೆ. ಹಾಗಾಗಿ 'ಭಾರತೀಯ ಸಾಂಸ್ಕೃತಿಕ ಚಿಂತನೆ' ಇವರೆಲ್ಲ ಕೃತಿಗಳ ಮುಖ್ಯ ಬುನಾದಿಯಾಗಿದೆ. ಡಿ. ಎಲ್. ಪಾಟೀಲರು ಹೇಳುವಂತೆ "ಒಂದು ಜನಾಂಗದ ಅಂತಃಸತ್ವವಾವುದು, ಅದರಲ್ಲಿ ಆಗುತ್ತಿರುವ ಪರಿವರ್ತನೆಗಳು ಯಾವುವು, ಏಕೆ ಎಂಬುದನ್ನು ಗುರುತಿಸಿ ಪ್ರಕಟಗೊಳಿಸುವುದು ಭೈರಪ್ಪನವರ ಕಾದಂಬರಿಗಳ ವೈಚಾರಿಕತೆಯ ಒಂದು ಮುಖವಾದರೆ ಅದರ ಮುಖಾಂತರವೇ ಜೀವನದ ನಾನಾ ಮುಖಗಳ ಮತ್ತು ಮೌಲ್ಯಗಳ ತಾತ್ತ್ವಿಕ ಮತ್ತು ಸಾಹಿತ್ಯಕ ಅನ್ವೇಷಣೆ ಆ ವೈಚಾರಿಕತೆಯ ಇನ್ನೊಂದು ಮುಖ.

.........ಯುಗ ಪರಿವರ್ತನೆ ಯಾವ ಕಾರಣಗಳಿಗಾಗಿಯೇ ಆಗುತ್ತಿರಲಿ, ಅದು ಸುಲಭವಾಗಿ ತನ್ನ ತಾನೇ ಆಗುವಂಥದಲ್ಲ ಎಂಬುದನ್ನೂ ಭೈರಪ್ಪನವರು ಚಿತ್ರಿಸಿರುವುದನ್ನು ಅರಿಯಬಹುದು" (೪೧ – ಸಹಸ್ಪಂದನ ).

ಪಾಶ್ಚಾತ್ಯ ಪ್ರಭಾವಗಳಿಂದ ಪಲ್ಲಟಗೊಂಡ ಭಾರತೀಯ ಬದುಕಿನ ಸಂಕೀರ್ಣತೆಯನ್ನು ದಾಖಲಿಸುವ ಭೈರಪ್ಪನವರಿಗೆ ಜೀವನದ ಬಗ್ಗೆ ತಮ್ಮದೇ ಆದ ವಿಶಿಷ್ಟ ತಿಳಿವಳಿಕೆ ಇದೆ :

"......ಜೀವನದಲ್ಲಿ ಯಾವ ಸತ್ಯವನ್ನು ಅರಸಬಹುದು... ಜೀವನದ ಬಗ್ಗೆ ಗಂಭೀರವಾಗಿ ಆಲೋಚಿಸಿದ್ದನ್ನು ಸಿದ್ಧಾಂತರೂಪದಲ್ಲಿ ಹೇಳಿದರೆ ಸಾಹಿತ್ಯವಾಗುವುದಿಲ್ಲ. ಸಿದ್ಧಾಂತ ರೂಪದಲ್ಲಿ ಜೀವನದ ಅರ್ಥ ಹೇಳಲು ರಾಮಕೃಷ್ಣ ಪರಮಹಂಸರಂಥವರಿಗೆ ಮಾತ್ರ ಸಾಧ್ಯ. ಜೀವನದಲ್ಲಿನ ಅನುಭವಗಳಿಗೆ ಒಂದು ರೂಪಕೊಡಲು ಮಾತ್ರ ಸಾಹಿತಿಗೆ ಸಾಧ್ಯ. ರೂಪ ಅಂದರೆ Focus ಅಂತ. ನಮ್ಮ ಜೀವನದ ಅನುಭವಗಳಿಗೆ ರೂಪ ಕೊಡೋದು ಕಲ್ಪನೆಯ ಮೂಲಕವೇ. ಯಾವುದು ಇರಲಿಲ್ಲವೊ ಅದನ್ನೇ ಸೃಷ್ಟಿ ಮಾಡಿ ಬರೆಯೋದು. ಆಗ ನಮಗೆ ಸಂಪೂರ್ಣ ಸ್ವಾತಂತ್ರ್ಯ ಬರುತ್ತೆ. ಜೀವನವನ್ನೇ ನಾವು ಬರೆಯೋದು ನಿಜ. ಅಂದ್ರೆ ಯಾಂತ್ರಿಕ ಜೀವನವನ್ನು ಅಲ್ಲ, ಕಲ್ಪನೆಯಲ್ಲಿ ಸೃಷ್ಟಿಸಿಕೊಳ್ಳುವ ಜೀವನವನ್ನು ಬರೆಯುವಾಗ, ಅದಕ್ಕೊಂದು ರೂಪ ಕೊಟ್ಟುಕೊಂಡಾಗ, ಅನುಭವ ಒಂದು ಸಾಂದ್ರತೆಗೆ ಬಂದು ಮುಟ್ಟುತ್ತೆ. ಅದಕ್ಕೊಂದು ರೂಪ ಬರುತ್ತದೆ. ಆ ರೂಪ ಕೊಟ್ಟಾಗ ಅರ್ಥವೂ ಅದರಲ್ಲಿ ಸಿಕ್ಕುತ್ತೆ'' (ಭೈರಪ್ಪಾಭಿನಂದನಾ – ೧೭೫).

ಈ ಸೂಕ್ಷ್ಮ ದೃಷ್ಟಿಕೋನ ಭೈರಪ್ಪನವರಿಗೇ ವಿಶಿಷ್ಟವಾದುದು. ಬದುಕಿನ ಪಲ್ಲಟದಿಂದ ಉಂಟಾಗುತ್ತಿರುವ ಪ್ರತಿಯೊಂದು ಪತನಮುಖೀ ಅಂಶವೂ ಇವರಿಗೆ ಮುಖ್ಯವಾಗಿದೆ. ಸಮಾಜ ವೈಯಕ್ತಿಕ ಮತ್ತು ಸಾಮಾಜಿಕ ಆಯಾಮಗಳೆರಡರಿಂದಲೂ ಭ್ರಷ್ಟಗೊಂಡಿದೆ. ಹಾಗಾಗಿ ದುರಂತವನ್ನು ಅನುಭವಿಸುತ್ತಿರುವ ಸಮಕಾಲೀನ ಬದುಕಿಗೆ ಸಾಂಸ್ಕೃತಿಕ ಸತ್ವವೊಂದೇ ಚೈತನ್ಯ ನೀಡಬಲ್ಲುದೆಂಬುದು ಭೈರಪ್ಪನವರ ವಿಚಾರವಾಗಿದೆ. ಜೀವನಾನುಭವದಲ್ಲಿ ಮಾಗಿ ಪೂರ್ಣ ಬದುಕನ್ನು ಸಾಧಿಸಬಲ್ಲ ಪಾತ್ರಗಳನ್ನು ಗಂಭೀರವಾಗಿ ಚಿತ್ರಿಸುತ್ತಾರೆ. ಅವರ ಸಾಹಿತ್ಯಕ ದೃಷ್ಟಿಕೋನ ಸಮಕಾಲೀನ ಅಗತ್ಯತೆಯನ್ನು ಅನಾವರಣಗೊಳಿಸುವುದೇ ಆಗಿದೆ. ಸಮಕಾಲೀನ ಭ್ರಷ್ಟತೆ ವರ್ತಮಾನವನ್ನು ನುಂಗಿ ನೊಣೆದು ಭವಿಷ್ಯವನ್ನು ಇಲ್ಲವಾಗಿಸುತ್ತದೆ ಎಂಬ ಖಚಿತ ಧೋರಣೆ ಇವರದಾಗಿದೆ ಎಂತಲೇ ಇವರ ಕೃತಿಗಳನ್ನು ವಿಶಿಷ್ಟವಾಗಿ ಅಭ್ಯಸಿಸಬೇಕು. ಬದುಕಿಗೆ ತನ್ನನ್ನು ಒಡ್ಡಿಕೊಳ್ಳುವ ಪ್ರಾಯೋಗಿಕ ಮನಸ್ಸು ಇವರ ಕೃತಿಗಳ ಜೀವಾಳ.

ಭೈರಪ್ಪನವರ ಸಮಗ್ರ ಕೃತಿಗಳನ್ನು ಮುಖ್ಯವಾಗಿ ಎರಡು ಗುಂಪು ಮಾಡಿಕೊಂಡು ವಿಮರ್ಶಿಸಲಾಗಿದೆ. ಸಾಂಸ್ಕೃತಿಕ ಮತ್ತು ಸಾಮಾಜಿಕ ಘರ್ಷಣೆಯೇ ಇದರ ಹಿನ್ನೆಲೆಯಾಗಿದೆ. ಸಂಸ್ಕೃತಿ ಮತ್ತು ಸಮಾಜ ಪರಸ್ಪರ ಅಭಿನ್ನವಾದುವುಗಳು. ಸಂಸ್ಕೃತಿದತ್ತ ಅಂಶಗಳು ಸಮಾಜದ ಮುಖ್ಯ ವಿಚಾರಗಳಾಗಿರುತ್ತವೆ. ಜೊತೆಗೆ ಬಾಹ್ಯ ಪ್ರಭಾವಗಳೂ ಸೇರಿಕೊಂಡಾಗ ಉಂಟಾಗುವ ಸಂಘರ್ಷವನ್ನು ಭೈರಪ್ಪನವರು ಗಂಭೀರವಾಗಿ ವಿಶ್ಲೇಷಿಸಿದ್ದಾರೆ. ಆಧುನಿಕ ವಿದ್ಯಾಭ್ಯಾಸ ಬದುಕಿನ ಲುಪ್ತ ಅಂಶಗಳನ್ನು ತುಂಬಿಕೊಡುವುದಕ್ಕೆ ಬದಲಾಗಿ, ಇನ್ನೂ ಭ್ರಷ್ಟಗೊಳಿಸಿರುವುದನ್ನು ಈ ಕೃತಿಗಳು ಧ್ವನಿಸುತ್ತವೆ.

೧. ಧರ್ಮಶ್ರೀ, ದಾಟು, ತಬ್ಬಲಿಯು ನೀನಾದೆ ಮಗನೆ, ನಾಯಿನೆರಳು, ವಂಶವೃಕ್ಷ, ಗ್ರಹಣ – ಸಾಂಸ್ಕೃತಿಕ ಘರ್ಷಣೆಯ ಕೃತಿಗಳು.

೨. ದೂರ ಸರಿದರು, ಮತದಾನ, ಜಲಪಾತ, ಗೃಹಭಂಗ, ನಿರಾಕರಣ, ಅನ್ವೇಷಣ, ನೆಲೆ, ಸಾಕ್ಷಿ, ಅಂಚು ಮತ್ತು ತಂತು–ಸಾಮಾಜಿಕ ಘರ್ಷಣೆಯ ಕೃತಿಗಳು.

ಈ ನಡುವೆ 'ಪರ್ವ' ಸಮಕಾಲೀನ ಸಂದರ್ಭದ ಎಲ್ಲ ಆಶಯ, ವಿಚಾರಗಳೊಂದಿಗೆ ಮಹಾಭಾರತ ಕಾಲದ ಬದುಕನ್ನು, ಆ ಯುಗದ ಮೌಲ್ಯಗಳನ್ನು ವಿಶ್ಲೇಷಿಸಿರುವುದರಿಂದ ಇದನ್ನು ವಿಶಿಷ್ಟವಾಗಿ ಗಮನಿಸಬಹುದು.

ಭೈರಪ್ಪನವರು ಮುಖ್ಯವಾಗಿ ಜಿಜ್ಞಾಸು ಪ್ರವೃತ್ತಿಯವರು. ಹಾಗಾಗಿ ಅವರ ಕೃತಿಗಳು ತಾತ್ತ್ವಿಕ ಚಿಂತನೆಗಳನ್ನೇ ಮತ್ತೆ ಮತ್ತೆ ಪ್ರತಿಪಾದಿಸುತ್ತವೆ. ಗೌರೀಶ ಕಾಯ್ಕಿಣಿಯವರು ಅವರ ಕೃತಿಗಳ ಒಟ್ಟು ತಾತ್ತ್ವಿಕ ದೃಷ್ಟಿಕೋನವನ್ನು ಸ್ಪಷ್ಟವಾಗಿ ಹೀಗೆ ಗುರುತಿಸಿದ್ದಾರೆ :

"ಚಿಂತನಶೀಲ ಪ್ರಕೃತಿಯ ತತ್ತ್ವ ಜಿಜ್ಞಾಸೆಯ ಚಟವುಳ್ಳ ಭೈರಪ್ಪನವರ ದಾರ್ಶನಿಕ ಪ್ರಜ್ಞೆಯು ಅವರ ಸಾಹಿತ್ಯಕ ಪ್ರತಿಭೆಯ ಒಂದು ಅಂಗವಾದ್ದರಿಂದ, ಸತ್ಯ ಸೌಂದರ್ಯಗಳ ಮೀಮಾಂಸೆ, ಸಾಹಿತ್ಯಕ ಮೌಲ್ಯಗಳ ವಿಚಾರ, ಪ್ರತಿಮಾ ವಿಧಾನದ ವಿಚಿಕಿತ್ಸೆ ಇತ್ಯಾದಿಗಳಂತೆ ಅವರ ಪ್ರತಿಯೊಂದು ಮಹತ್ವದ ಕಾದಂಬರಿಯಲ್ಲಿ ಪ್ರತ್ಯಕ್ಷವಾಗಿ ಅಥವಾ ಪರ್ಯಾಯವಾಗಿ 'ಧರ್ಮ'ವೂ ಒಂದು Major preconception. ಇಲ್ಲಿ ಧರ್ಮವೆಂದರೆ ವಿಶುದ್ಧ ಮಾನವ ಧರ್ಮ. ಜೀವಾತ್ಮ ಪರಮಾತ್ಮರ ಅನ್ಯೋನ್ಯತಮ ಮೋಕ್ಷ ಧರ್ಮವೆಂದಲ್ಲ. ಭೈರಪ್ಪನವರ ಕೃತಿಗಳಲ್ಲಿ ಚರ್ಚೆಮಾಡಿ, ಚರಿತ್ರೆಯಾಗಿ, ಚಾರಿತ್ರ್ಯದ ಅಂಗವಾಗಿ ಸತ್ವವಾಗಿ ಧರ್ಮವು ಅಲ್ಲಲ್ಲಿ ಹರಿದಾಡಿದೆ. ಈ ಧರ್ಮವು ವಿಶೇಷವಾಗಿ ಹಿಂದೂ ಸಂಸ್ಕೃತಿ ಸಂಪ್ರದಾಯ ಪರಂಪರೆಯ ಸತ್ವವಾಗಿ, ಸತ್ತೆಯಾಗಿ, ಸಾಮಾಜಿಕ, ಕೌಟುಂಬಿಕ ಜೀವನದ ಲಕ್ಷಣವಾಗಿ, ಮೌಲ್ಯವಾಗಿ, ಪರಿಪರಿಯಾಗಿ ಆವಿಷ್ಕಾರ ಪರಿಷ್ಕಾರಗೊಂಡಿದೆ'' (ಸಹಸ್ಪಂದನ–೩).

ಕಾಯ್ಕಿಣಿಯವರ ಈ ಮಾತುಗಳು ಮೊದಲ ಗುಂಪಿನ ಕಾದಂಬರಿಗಳ ವಿಶ್ಲೇಷಣೆಗೆ ಹೆಚ್ಚು ಗ್ರಾಸವನ್ನೊದಗಿಸುತ್ತವೆ. ಆಧುನಿಕ ವಿದ್ಯಾಭ್ಯಾಸ ತಂದ ಸಂಘರ್ಷ 'ಪರಕೀಯತೆ'ಯನ್ನು ಉಂಟುಮಾಡುವುದಾಗಿದೆ. 'ಧರ್ಮಶ್ರೀ' ಇದಕ್ಕೆ ಉತ್ತಮ ಉದಾಹರಣೆ. ಹಿಂದೂ ಧರ್ಮದ ಕಠಿಣ ಕಟ್ಟುಪಾಡುಗಳಿಂದ ನೊಂದ ಸತ್ಯನಾರಾಯಣ ಲಿಲ್ಲಿಗಾಗಿ ಕ್ರೈಸ್ತ ಧರ್ಮಕ್ಕೆ ಪರಿವರ್ತನೆ ಹೊಂದುತ್ತಾನೆ. ಲಿಲ್ಲಿಯನ್ನು ಮದುವೆಯಾಗಿ ಕ್ರೈಸ್ತ ವಿದ್ಯಾಸಂಸ್ಥೆಯಲ್ಲಿ ಅಧ್ಯಾಪಕನಾದ ಅವನಿಗೆ ಅಲ್ಲಿನ ಯಾಂತ್ರಿಕ ನೀರಸ ಚಟುವಟಿಕೆ ಹಿಡಿಸುವುದಿಲ್ಲ. ಜೊತೆಗೆ ಕ್ರೈಸ್ತ ಪಾದ್ರಿಗಳ ಕಟ್ಟುಪಾಡುಗಳು ಇನ್ನೂ ದಿಗ್ಬಂಧನಕ್ಕೆ ಗುರಿಮಾಡುತ್ತವೆ. ಬೇಸತ್ತ ಅವನು ಲಿಲ್ಲಿಯೊಂದಿಗೆ ಹಿಂದೂ ಧರ್ಮಕ್ಕೆ ವಾಪಸ್ಸಾಗುತ್ತಾನೆ. ಆರ್ಯಸಮಾಜದ ಚಿಂತನೆಗಳ ಪ್ರಭಾವವಿದು. ದಿವಾನ್‌ಜಿಯವರು ಈ ಮತಾಂತರವನ್ನು ಪ್ರಶ್ನಿಸುತ್ತಾರೆ : "ಸಂಸ್ಕೃತಿಗಳ ಘರ್ಷಣೆಯನ್ನಂತೂ ತಪ್ಪಿಸುವುದು ಸಾಧ್ಯವಿಲ್ಲ. ಇಂತಹ ಸ್ಥಿತಿಯಲ್ಲಿ ಲೇಖಕರು ತೋರಿಸುವ ಪರಿಹಾರದ ಸ್ವರೂಪ ಎಂತಹುದೂ ಎಂಬುದರ ಮೇಲೂ ಕಾದಂಬರಿಯ ಹಿರಿಮೆ ಆಧರಿಸಿದೆ. ಹೊರಗಿನ ಪ್ರಭಾವಗಳು ಇಂದು ಇನ್ನು ಬಲವತ್ತರವಾಗಿವೆ. ವೈಜ್ಞಾನಿಕ ನಾಗರಿಕತೆಯದೂ ಒಂದು ಸಂಸ್ಕೃತಿಯಿದೆ. ಅದರ ಆಘಾತಗಳನ್ನು

ನಮ್ಮ ಸಂಸ್ಕೃತಿ ಜೀರ್ಣಿಸಿಕೊಳ್ಳುತ್ತದೆ ಎಂಬ ಪ್ರಶ್ನೆಗೆ ಇಲ್ಲಿ ಉತ್ತರವಿಲ್ಲ'' (ಸಹಸ್ಪಂದನ ೧೩೮).

ಸಾಮಾಜಿಕ ಪರಕೀಯತೆಯಲ್ಲಿ ವೈಜ್ಞಾನಿಕತೆಯ ಅಂಶಗಳನ್ನು ಅರಗಿಸಿಕೊಳ್ಳದ ಒಂದು ಮಿತಿ ಧರ್ಮಶ್ರೀಯ ಮುಖ್ಯ ಸಮಸ್ಯೆಯಾಗಿದೆ. ಭೈರಪ್ಪನವರ 'ಪರಿಹಾರ ಮಾರ್ಗ' ಒಂದು ಪ್ರಶ್ನೆಯಾಗಿದೆ. ಸತ್ಯನಂತೆ ಲಿಲ್ಲಿಯನ್ನು ಬ್ರಾಹ್ಮಣೆಯನ್ನಾಗಿ ಸ್ವೀಕರಿಸಲಾಗುವುದೆ? ಎನ್ನುತ್ತಾರೆ ಗೋರಾ. ಈ ಕೃತಿ ಸಾಮಾಜಿಕ ಬದಲಾವಣೆಯ ಉದ್ದೇಶದ್ದಾಗಿದ್ದು ಮಿತಿಯಿಂದ ಕೂಡಿದೆ ಎಂದು ಭೈರಪ್ಪನವರೇ ಒಪ್ಪಿಕೊಂಡಿದ್ದಾರೆ.

ಆದರೆ ಅವರ ವಂಶವೃಕ್ಷವೂ ಈ ಮುಖ್ಯ ಸಮಸ್ಯೆಯ 'ಪರಿಹಾರ ಮಾರ್ಗದ ಬದ್ಧತೆ'ಯಿಂದ ಮುಕ್ತವಾಗಿಲ್ಲ. ಸಿದ್ಧ ಚೌಕಟ್ಟನಡಿಯಲ್ಲಿ ಭೈರಪ್ಪನವರು ಕಾದಂಬರಿಯನ್ನು ಬರೆದಿರುವುದನ್ನು ಟಿ. ಪಿ. ಅಶೋಕರು ಪ್ರಶ್ನಿಸುತ್ತಾರೆ :

"…..ಕಾದಂಬರಿ ಪ್ರಾರಂಭವಾಗುವುದಕ್ಕೆ ಮೊದಲೇ ಶ್ರೋತ್ರಿಯವರು ಪಕ್ವತೆ ಪಡೆದು ಬಿಟ್ಟಿದ್ದಾರೆ ಎಂಬ ನಂಬಿಕೆಯನ್ನು ಓದುಗರಲ್ಲಿ ಮೂಡಿಸಿಯೇ ಕಾದಂಬರಿಕಾರರು ಇನ್ನಿತರರ ಜೀವನ ದೃಷ್ಟಿಗಳನ್ನು ಶ್ರೋತ್ರಿಯವರ ಜೀವನ ದೃಷ್ಟಿಯ ಹಿನ್ನೆಲೆಯಲ್ಲಿ ಪರಿಶೀಲಿಸ ಹೊರಡುವುದರಿಂದ ಭೈರಪ್ಪನವರ ಸತ್ಯಾನ್ವೇಷಣೆಯ ಗುರಿಯ ಬಗ್ಗೆ ಕೆಲವು ಅನುಮಾನಗಳು ತಲೆ ಹಾಕುತ್ತವೆ….. 'ವಂಶವೃಕ್ಷ'ದ ಗುರಿ ಸತ್ಯಾನ್ವೇಷಣೆ ಆಗದೆ ಒಪ್ಪಿತ ಸತ್ಯವೊಂದರ ಕೇವಲ ವೈಭವೀಕರಣವಾಗುತ್ತದೆ'' (ಕನ್ನಡ ವಿಮರ್ಶೆ : ೨೫೫).

ಗಿರಡ್ಡಿ ಗೋವಿಂದರಾಜು, ಆರ್ಶಿಯಸ್ ಸುಂದರಂ, ಶಾಂತಿನಾಥ ದೇಸಾಯಿ ಮೊದಲಾದವರು ಕೂಡ ಈ ದೌರ್ಬಲ್ಯವನ್ನೇ ಗುರುತಿಸಿದ್ದಾರೆ. ಆದರೆ ಆಮೂರರು ಮತ್ತು ಬನ್ನಂಜೆ ಭೈರಪ್ಪನವರ ಕಲಾತ್ಮಕತೆಯ ಬಗ್ಗೆ ಚರ್ಚಿಸುತ್ತಾರೆ :

"ವಂಶವೃಕ್ಷ ಸೋಲುವುದು ಮೌಲ್ಯಗಳ ಅಭಾವ ಅವಸ್ಥೆಗಳಿಂದಲ್ಲ. ಮೌಲ್ಯ ಪ್ರತಿಪಾದನೆಯೇ ಈ ಕಾದಂಬರಿಯ ಮೂಲಪ್ರೇರಣೆಯಾಗಿದೆ, ಮತ್ತು ಅದರ ಸಂಕಲ್ಪಿತ ಮೌಲ್ಯವ್ಯವಸ್ಥೆ ಸಾಕಷ್ಟು ಭದ್ರವಾಗಿಯೇ ಇದೆ. ಹೀಗಿದ್ದರೂ ಕಾದಂಬರಿ ಸೋಲುವುದಕ್ಕೆ ಮುಖ್ಯ ಕಾರಣವೆಂದರೆ ಕೃತಿಗೆ ಹೊರಗಿನಿಂದ ಎಂದರೆ, ಭಾರತೀಯ ಸಂಸ್ಕೃತಿಯ ಅನೇಕ ಉಗಮಗಳಿಂದ ತಂದ ಈ ಮೌಲ್ಯ ವ್ಯವಸ್ಥೆಗೆ ಕಲೆಯ ದೇಹವನ್ನು ಸೃಷ್ಟಿಸುವಲ್ಲಿ ಭೈರಪ್ಪನವರು ಸಂಪೂರ್ಣ ಯಶಸ್ಸನ್ನು ಗಳಿಸದೆ ಇರುವುದು'' (ಸಹಸ್ಪಂದನ : ೨೩೩). ಬನ್ನಂಜೆ ಇದು 'ತ್ರಿಶಂಕು ಸ್ಥಿತಿ'ಯ ಕೃತಿ ಎಂದಿದ್ದಾರೆ. 'ಜೀವನ ಮಾಗುವಿಕೆ' ಬದ್ಧತೆಯನ್ನು ಕಳಚುತ್ತದೆಂದು ಶ್ರೋತ್ರಿಯವರ ಮೂಲಕ ಸಿದ್ಧವಾಗುತ್ತದೆ. ತನ್ನಿಂದಾಗಿಯೇ ಕಾತ್ಯಾಯಿನಿ ಸಾಯಬೇಕಾಯಿತೆಂದು ತಿಳಿದಾಗ ಅವರು ನಡೆದುಕೊಳ್ಳುವ ರೀತಿ ವಿಶಿಷ್ಟವಾದುದು. ತತ್ತ್ವಶಾಸ್ತ್ರ ಮತ್ತು ಮನಶ್ಶಾಸ್ತ್ರದ ವಿಚಾರಗಳು ಮತ್ತೆ ಮತ್ತೆ ಕಾಮಿಸಿಕೊಂಡು ಕಲಾತ್ಮಕತೆ ಸೋಲುತ್ತದೆ. ಜಾತಿ, ಧರ್ಮಗಳು ಸಮಕಾಲೀನ ಸಂದರ್ಭದಲ್ಲಿ ಹೆಚ್ಚು ಸಂದಿಗ್ಧತೆಯನ್ನುಂಟು

ಮಾಡಿವೆ. ಆದರೆ ಅದನ್ನು ಪರಿಹರಿಸಿಕೊಂಡು ಬದುಕು ಸಾಗುವುದನ್ನು 'ವಂಶವೃಕ್ಷ' ಹೇಳುವುದಿಲ್ಲ. ಹಾಗಾಗಿ ಕೃತಿಕಾರರ ಬದ್ಧ ದೃಷ್ಟಿಕೋನಕ್ಕೆ 'ಸಾವು' ಇಲ್ಲವೆ 'ವಿನಾಶ' ಮಾತ್ರ ಪರಿಹಾರ ಕಂಡಿರುವುದು ವಿಮರ್ಶಕರ ಮುಖ್ಯ ಪ್ರಶ್ನೆಯಾಗಿದೆ.

ವಂಶವೃಕ್ಷದಂತೆಯೇ 'ದಾಟು' ಕೂಡ ಈ ಸಮಸ್ಯೆಯನ್ನು ಒಳಗೊಂಡಿದೆ. ಅಂಬೇಡ್ಕರ್ ಮತ್ತು ಮಹಾತ್ಮಗಾಂಧೀಜಿಯವರ ಚಿಂತನೆಗಳು ಸಮಕಾಲೀನ ಬದುಕಿಗೆ ವೈಚಾರಿಕ ಆಯಾಮವನ್ನು ನೀಡಿವೆ. 'ದಾಟು' ಬದುಕಿನ ಹೋರಾಟವನ್ನು ದಾಖಲಿಸುತ್ತಾ ಹಿಂಸಾಪ್ರಧಾನ ಹೋರಾಟ ವಿನಾಶಕ್ಕೆ ಕಾರಣವಾಗುತ್ತದೆಂದು ಧ್ವನಿಸುತ್ತದೆ. ಆದರೆ ಬದಲಾಗುವ ಬದುಕು ಅದನ್ನು ಹೇಗೆ ಅರಗಿಸಿಕೊಳ್ಳುತ್ತಿದೆ ಎಂಬುದನ್ನು ಈ ಕೃತಿ ಹೇಳುವುದಿಲ್ಲ. ಎಂ.ಜಿ.ಕೆ. ಭೈರಪ್ಪನವರ ಈ ವಿಚಾರವನ್ನು ಪ್ರಶ್ನಿಸುತ್ತಾರೆ. ಮೌಲ್ಯಗಳ ಬದಲಾಗುವಿಕೆ ಮತ್ತು ಸಾಮಾಜಿಕ ಬದಲಾವಣೆಗಳಿಗೆ ಪುರಾತನತೆಯನ್ನು ಎತ್ತಿ ಹಿಡಿಯುತ್ತಾರೆ ಲೇಖಕರು. ಹಾಗಾಗಿ ಇಲ್ಲಿ ಅವರ ಒಲವುಗಳು 'ಪರೀಕ್ಷೆ'ಗೊಳಪಟ್ಟಿಲ್ಲವೆಂದು ಹೇಳುತ್ತಾರೆ. ಈ ವಿಚಾರಕ್ಕೆ ಪೂರಕವಾಗಿ ಕಾದಂಬರಿಯ ಒಂದು ಘಟನೆಯನ್ನು ನಿದರ್ಶಿಸುತ್ತಾರೆ: "ದಾಟುವಿನಲ್ಲಿ ನಾಶವಾಗುವುದು ದೇವಸ್ಥಾನ ಮತ್ತು ಮೋಹನದಾಸ. ದೇವಸ್ಥಾನ ಮಡಿವಂತಿಕೆಯ ಸಂಕೇತವಾಗಿ, ಮೋಹನದಾಸ ಈ ರೀತಿಯ ಮಡಿವಂತಿಕೆಯ ವಿರೋಧಶಕ್ತಿಯಾಗಿ ಬೆಳೆದಿದ್ದರೆ ಈ ರೀತಿಯ ಕೊನೆ ಅರ್ಥಪೂರ್ಣವಾಗುತ್ತಿತ್ತು" (ಸಹಸ್ಪಂದನ–೪೯೨). ಈ ಮಾತುಗಳು ಕೃತಿಯ ವೈರುಧ್ಯವನ್ನು ಕುರಿತುದಾಗಿವೆ.

ವಂಶವೃಕ್ಷದಂತೆಯೇ ದಾಟುವಿನಲ್ಲಿ ಕೂಡ ವೆಂಕಟರಮಣಯ್ಯ ಅರೆಹುಚ್ಚು, ಅರೆ ಎಚ್ಚರದಲ್ಲಿ ನುಡಿದ 'ಈ ಗರ್ಭ ಉಳಿಯೊಲ್ಲ', 'ಜಲಪ್ರಳಯ'ವಾಗುತ್ತದೆ ಎಂಬ ಮಾತುಗಳನ್ನು ದಿಟವಾಗಿಸಲು ಏಕೆ ಪ್ರಯತ್ನಿಸುತ್ತಾರೆ ಎಂದು ಡಿ.ಎ.ಶಂಕರ್ ಪ್ರಶ್ನಿಸುತ್ತಾರೆ. ಭಗವಾನ್‌ರೂ ಕೂಡ ಹೀಗೇ ಚರ್ಚಿಸುತ್ತಾ ಪ್ರಗತಿಪರ ಪಾತ್ರಗಳೆಲ್ಲ ಸತ್ತುಹೋಗುವುದರ ಮೂಲಕ ದಾಟು ದುರಂತಾಂತ್ಯವನ್ನು ಪಡೆಯುತ್ತದೆನ್ನುತ್ತಾರೆ. ಸೇವೆ, ಪ್ರಾಮಾಣಿಕತೆ ಮತ್ತು ಅಹಿಂಸೆಯಂಥ ವಿಚಾರಗಳನ್ನು ಒಪ್ಪಿಕೊಂಡ ಭೈರಪ್ಪನವರು ಸಮಕಾಲೀನ ಹಿಂಸಾತ್ಮಕ ಹೋರಾಟ ದುರಂತವನ್ನುಂಟು ಮಾಡುತ್ತದೆ ಎಂಬುದಾಗಿ ಗ್ರಹಿಸಿದ್ದಾರೆ. ಆದ್ದರಿಂದ ದಾಟು, ವಂಶವೃಕ್ಷದ ಸಂಕೀರ್ಣತೆಗಳು ಕೇವಲ ವೈಯಕ್ತಿಕವಾಗಿ ಉಳಿಯದೆ ಸಮಗ್ರ ಸಾಮಾಜಿಕ ವ್ಯಾಪ್ತಿಯನ್ನು ಪಡೆಯುತ್ತವೆ. ಇದನ್ನು 'ಪ್ರತಿಗಾಮಿ'ತನವೆಂದು ಕರೆದ ಮ.ನ.ಜ ಈ ಕೃತಿ 'ಬ್ರಾಹ್ಮಣ್ಯದ ಮತ್ತು ಬ್ರಾಹ್ಮಣ ಸಮಾಜದ ಪ್ರತಿಷ್ಠಾಪನೆಯ ಮಹಾಸಾಹಸ' (ಸಂಕ್ರಮಣ–೭೫) ಎನ್ನುತ್ತಾರೆ. ತಿಳಿವಳಿಕೆಯುತ ಹೋರಾಟ ಮಾತ್ರ ಸಮಗ್ರ ಜನಮನವನ್ನು ಸ್ಪಂದಿಸಬಲ್ಲುದೆಂಬುದು ಭೈರಪ್ಪನವರ ತಾತ್ವಿಕ ಅಭಿಪ್ರಾಯವಾಗಿದೆ. ಹಾಗಾಗಿ ಅವರು ಮತ್ತೆ ಮತ್ತೆ ತಿಳಿವಳಿಕೆಗೆ, ಪಾರಂಪರಿಕ ಜ್ಞಾನ, ಸೇವೆ, ಪ್ರಾಮಾಣಿಕತೆ ಮತ್ತು ಅಹಿಂಸೆಯಂಥ ಮೌಲ್ಯಗಳನ್ನು ಪ್ರತಿಪಾದಿಸುತ್ತಾರೆ.

ಅವರ ಮುಂದಿನ ಕಾದಂಬರಿಗಳಾದ 'ಗ್ರಹಣ', 'ತಬ್ಬಲಿಯು ನೀನಾದೆ ಮಗನೆ' ಮತ್ತು 'ನಾಯಿ ನೆರಳು' ಕೃತಿಗಳು ಕೂಡ ಈ ಅಂಶಗಳನ್ನೇ ಧ್ವನಿಸುತ್ತವೆ. ಹಿಂದೂ ಪರಂಪರೆಯ ನಂಬಿಕೆ,

ಸಂಪ್ರದಾಯಗಳ ಮೂಲಕ 'ಪರಿಶುದ್ಧ ಆಧ್ಯಾತ್ಮಿಕತೆ'ಯನ್ನು ಎತ್ತಿ ಹಿಡಿಯುತ್ತಾರೆ. ಭೈರಪ್ಪನವರಿಗೆ ಪರಂಪರೆ ಒಂದು ಜೀವಂತ ಸತ್ವ. ಹಾಗಾಗಿ ಪುನರ್ಜನ್ಮಾದಿಗಳನ್ನು ಕುರಿತ ಜನರ ನಂಬಿಕೆಗಳು ಕೇವಲ ಮೌಢ್ಯವಲ್ಲವೆಂಬ ಹಿನ್ನೆಲೆಯಲ್ಲಿ 'ನಾಯಿ ನೆರಳು' ಕಾದಂಬರಿ ಬರೆಯುತ್ತಾರೆ :

"ಪೂರ್ವಕಾಲದ ಜನರ ನಂಬಿಕೆ, ಆಚಾರ ವಿಚಾರಗಳು, ಕೆಲವು ಮೌಲ್ಯಗಳನ್ನು ಪ್ರತಿನಿಧಿಸುತ್ತವೆ. ನಾವು ಸತ್ತಮೇಲೆ ಆತ್ಮವು ಏನಾಗುತ್ತದೆ? ಆತ್ಮವು ದೇಹಕ್ಕಿಂತ ಭಿನ್ನವಾದುದೇ? ಪುನರ್‌ಜನ್ಮವೆಂಬುದು ಉಂಟೇ? ಉಂಟಾದರೆ ಯಾವ ನಿಯಮಕ್ಕನುಸಾರವಾಗಿ ಆತ್ಮವು ತನ್ನ ಮುಂದಿನ ಜನ್ಮವನ್ನು ಪಡೆಯುತ್ತದೆ? ಇತ್ಯಾದಿ ಪ್ರಶ್ನೆಗಳಿಂದ ಪೂರ್ವಜರು ಒಂದು ಹೊಸ ಜಗತ್ತನ್ನೇ ನಿರ್ಮಿಸಿದ್ದರು. ಅಥವಾ ತಾವು ವಾಸಿಸುತ್ತಿದ್ದ ಭೌತಿಕ ಜಗತ್ತಿನ ಪರಿಧಿಯನ್ನು ವಿಸ್ತರಿಸಿದ್ದರು'' (ಮೌಲ್ಯಾತ್ಮಕ ವಾಸ್ತವತೆ –೮೫). ಈ ಮುಖ್ಯ ವಿಚಾರದ ಹಿನ್ನೆಲೆಯಲ್ಲಿ ನಾಯಿನೆರಳು ಕೃತಿ ರಚನೆಯಾಯಿತು. ನಂಬಿಕೆ ಮತ್ತು ವಾಸ್ತವತೆಯ ಸತ್ಯಾಸತ್ಯ ವಿವೇಚನೆ ಇದರ ಅಂತರಾಳ.

ವಿಮರ್ಶಕರು ಈ ಅಂಶಗಳನ್ನೇ ಆಧರಿಸಿ ಕೆಲವು ಪ್ರಶ್ನೆಗಳನ್ನೆತ್ತುತ್ತಾರೆ. ಶಿವರಾಮು ಕಾಡನಕುಪ್ಪೆ ಪೂರ್ವಜನ್ಮದಲ್ಲಿ ತನಗೆ ಮದುವೆಯಾಗಿದೆಯೆಂದು ಹೇಳುವ ಕ್ಷೇತ್ರಪಾಲ ಈ ಜನ್ಮದ ಮುಂಜಿಯೇ ಮೊದಲಾದ ಕಾರ್ಯಗಳಿಗೆ ಒಪ್ಪಿದ್ದು ಹೇಗೆ ? ಸದಾ ಅಲೌಕಿಕದಲ್ಲಿರುವ ಈತ ಪುಟ್ಟಿಯನ್ನು ಒಮ್ಮೆಲೆ ಏಕೆ ಎಳೆದುಕೊಳ್ಳುತ್ತಾನೆ ? ಎಂಬುದಾಗಿ ಪ್ರಶ್ನಿಸಿ ಆತನ ಬಗ್ಗೆ ಹೀಗೆ ಹೇಳುತ್ತಾರೆ.

".......ಇದೊಂದು ಸಿದ್ಧ ಪಾತ್ರ. ಈತನ ಬದುಕು ಸಮಕಾಲೀನದಲ್ಲಿದ್ದರೂ ಘಟನೆಗಳೆಲ್ಲ ಪುರಾಣದಂತೆ. ಇದು ಎಷ್ಟರ ಮಟ್ಟಿಗೆ ಸಾಧ್ಯ ?''

"....... ಅಚ್ಯುತನ ಪಾತ್ರ ಒಂದು ರೀತಿಯಲ್ಲಿ ಪ್ರಗತಿಗಾಮಿಯಾಗಿ ಕಂಡರೂ, ಕೊನೆಗೆ ಸೋತು ಪ್ರತಿಗಾಮಿಯಾಗಿ ಬಿಡುತ್ತದೆ. 'ತಬ್ಬಲಿಯ – ಕಾಳಿಂಗ', 'ವಂಶವೃಕ್ಷದ ಕಾತ್ಯಾಯನಿ', 'ಧರ್ಮಶ್ರೀಯ ಸತ್ಯ' – ಇರುವಂತೆ ಈತನೂ ಕೇವಲ ಒಂದು ದ್ವಂದ್ವ ಪಾತ್ರವೆನಿಸಿ, ಏನನ್ನೂ ಹೇಳದೆ ಏನನ್ನೂ ಸಾಧಿಸದೆ ಹೋಗುತ್ತಾನೆ.'' (ಸಹಸ್ಪಂದನ–೩೨೯)

ಈ ಮಾತುಗಳು ಮುಖ್ಯವಾದವು. ಇಡೀ ಕೃತಿ 'ವಿರೋಧಿ ಬೌದ್ಧಿಕ' ಜಗತ್ತಿನಲ್ಲಿ ನಡೆಯುತ್ತಾ ಸಮಕಾಲೀನ ತಿಳಿವಳಿಕೆಯ ಅನೇಕ ಗೊಂದಲಗಳನ್ನು ಮನಗಾಣಿಸುತ್ತದೆ. ವೈಜ್ಞಾನಿಕ ಚಿಂತನೆಗಳು ಪಾರಂಪರಿಕ ನಂಬಿಕೆಗಳನ್ನು ಕೇವಲ ನಿರಾಕರಣ ನೆಲೆಯಲ್ಲಿಯೇ ನೋಡುತ್ತಿರುವುದನ್ನು ಅಚ್ಯುತ–ಕ್ಷೇತ್ರಪಾಲರ ಘರ್ಷಣೆಯು ಸ್ಪಷ್ಟಪಡಿಸುತ್ತದೆ. ಆದರೆ ಭೈರಪ್ಪನವರು ಮತ್ತೆ ಮತ್ತೆ 'ಸಾಂಪ್ರದಾಯಿಕ ಶಿಕ್ಷೆ' 'ಪಶ್ಚಾತ್ತಾಪ' ಪರಿಹಾರವನ್ನು ಕೃತಿಯಲ್ಲಿ ತರುವುದರಿಂದ ಈ ಎರಡರ ಸಂಘರ್ಷ ಹೊಸ ಅನ್ವೇಷಣೆಗೆ ಹಾದಿ ಮಾಡಿಕೊಡದೆ ಹೋಗುತ್ತದೆ. ಈ ವಿಚಾರ ಅವರ ಅನೇಕ ಕಾದಂಬರಿಗಳಿಗೂ ಅನ್ವಯಿಸುತ್ತದೆ. ತಬ್ಬಲಿಯ ಕಾಳಿಂಗ, ವಂಶವೃಕ್ಷದ ಕಾತ್ಯಾಯನಿ,

ದಾಟುವಿನ ಮೋಹನದಾಸ, ಮೊದಲಾದವರೆಲ್ಲ ಹೊಂದುವ ಅವಸ್ಥೆ ಇದಕ್ಕೆ ನಿದರ್ಶನ. ಇತ್ತೀಚಿನ ತಂತು ಕೂಡ ಈ ಸಮಸ್ಯೆಯಿಂದ ಪಾರಾಗಿಲ್ಲ.

'ತಬ್ಬಲಿಯು ನೀನಾದೆ ಮಗನೆ' ಯೂ ಈ ಎರಡು ಅಂಶಗಳ ಸಂಘರ್ಷವೇ ಆಗಿದೆ. ಅಹಿಂಸೆ, ಸತ್ಯ, ಪ್ರೇಮಗಳ ಮೂಲಕ ಕ್ರೌರ್ಯವನ್ನು ಗೆಲ್ಲಬೇಕೆಂದು ಧ್ವನಿಸುತ್ತದೆ. ಜೊತೆಗೆ ಸಮಕಾಲೀನ ಧೋರಣೆಯು ಪ್ರಾಣಿ ಪಕ್ಷಿಗಳ ಬಗ್ಗೆ ಹೇಗಿದೆ? ಎಂಬುದೂ ಇಲ್ಲಿದೆ. ಜಯತೀರ್ಥ ರಾಜಪುರೋಹಿತರು ಈ ಕೃತಿಯ ಆಶಯವನ್ನು ಕುರಿತು ಹೇಳುತ್ತಾರೆ : "ಯಾಂತ್ರಿಕ ವ್ಯವಸಾಯದ ಹಿನ್ನೆಲೆಯಲ್ಲಿ ಗೋವಿನ ಬಗ್ಗೆ ಇರುವ ಭಾರತೀಯ ಪರಂಪರಾಗತ ದೃಷ್ಟಿ ಹೇಗೆ ಪರಿವರ್ತನೆಗೊಳ್ಳುತ್ತಿದೆಯೆಂಬುದನ್ನು ಇವರು ಸಮರ್ಥವಾಗಿ ಚಿತ್ರಿಸಿದ್ದಾರೆ ......

......... ಈ ಕಾದಂಬರಿಯು ಹಸುವನ್ನಷ್ಟೇ ಅಲ್ಲದೆ ಎಲ್ಲ ಪ್ರಾಣಿಗಳನ್ನು ರಕ್ಷಿಸುವ ಬಗ್ಗೆ ಪೌರ್ವಾತ್ಯ ಪಾಶ್ಚಿಮತ್ಯ ದೃಷ್ಟಿಕೋನಗಳ ನಡುವಿನ ಸಂಘರ್ಷವನ್ನು ಚಿತ್ರಿಸುತ್ತದೆ. ಇಂಥ ವಿಷಯಗಳಲ್ಲಿ 'ಸರ್ವಭೂತ ಹಿತೇರತಾಃ' ಎನ್ನುವುದು ಸಾಂಸ್ಕೃತಿಕ ಜೀವನ ಪಾಠದ ಭಾರತೀಯ ದೃಷ್ಟಿಯೊದರೆ, ಪಾಶ್ಚಿಮಾತ್ಯರದು ಅವಶ್ಯಕತೆಗೆ ಅನುಗುಣವಾದ ಆರ್ಥಿಕ ದೃಷ್ಟಿಯಾಗುತ್ತದೆ" (ಸಹಸ್ಪಂದನ– ೪೨೬).

ವಿದೇಶದಲ್ಲಿ ವಿದ್ಯಾಭ್ಯಾಸ ಮುಗಿಸಿ ಹಿಂತಿರುಗಿದ ಕಾಳಿಂಗನ ವೈಜ್ಞಾನಿಕ ತಿಳಿವಳಿಕೆ ಮಾನವೀಯ ನೆಲೆಗೆ ಭಿನ್ನವಾಗಿದೆ. ಮಾನವೀಯ ದೃಷ್ಟಿಕೋನದ ವೆಂಕಟರಮಣ ಕಾಳಿಂಗನ ರೀತಿ ನೀತಿಗಳಿಗೆ ವಿರುದ್ಧ. ಆಧುನಿಕ ವಿದ್ಯಾಭ್ಯಾಸದ 'ಅನುಭೋಗ' ಸಂವೇದನೆಯನ್ನು ಭೈರಪ್ಪನವರು ಪ್ರಶ್ನಿಸುವುದು ಗಂಭೀರವೇ ಆಗಿದೆ.

ಗ್ರಹಣದ ವಿಚಾರ ಈ ಎರಡು ಕೃತಿಗಳಿಗಿಂತ ಭಿನ್ನವಾದುದು. ಸ್ವಾಮೀಜಿ ಶುದ್ಧ ಮಾನವ ಪ್ರಜ್ಞೆಯನ್ನು ಹೇಳಿದರೆ ಅದನ್ನು ಅರಗಿಸಿಕೊಳ್ಳಲಾಗದೆ ಜಡವಾಗಿರುವ ಮೌಢ್ಯ ವ್ಯವಸ್ಥೆಯ ಸ್ವರೂಪವನ್ನು ಕೃತಿ ಹೇಳುತ್ತದೆ. 'ಗ್ರಹಣ' ಬೌದ್ಧಿಕ ಸ್ವರೂಪದ ಅನಾವರಣವೂ ಹೌದು. ಅದನ್ನು ಮೀರಲು ಸಾಧ್ಯವಾಗದೆ ತಟಸ್ಥವಾಗಿರುವ ವ್ಯವಸ್ಥೆಯಲ್ಲಿ ವೈದ್ಯೆ ಸರೋಜಮ್ಮ, ವಿಜ್ಞಾನದ ಅಧ್ಯಾಪಕರುಗಳೂ ಇರುವುದು ವಿಪರ್ಯಾಸವೇನಲ್ಲ. ಒಂದೆಡೆ ವೈಜ್ಞಾನಿಕ ಚಿಂತನೆಗಳ ಅತಿರೇಕವಾದರೆ, ಮತ್ತೊಂದೆಡೆ ಅದನ್ನೋದಿಯೂ ಗ್ರಹಣದಲ್ಲೆ ಬದುಕುವ ವಿದ್ಯಾವಂತ ವರ್ಗ – ಇಂಥ ಸಮಕಾಲೀನ ಸಂಕೀರ್ಣತೆಯನ್ನು ಅಭಿವ್ಯಕ್ತಿಸುವುದರ ಮೂಲಕ ಭೈರಪ್ಪನವರು ಅನೇಕ ಸಂವಾದಗಳಿಗೆ ಎಡೆ ಮಾಡಿದ್ದಾರೆ. ಆದರೆ ಇದನ್ನು ಅರಗಿಸಿಕೊಳ್ಳಬೇಕಾದ ವಿಧಾನವನ್ನು ಮಾತ್ರ ಸಾಂಪ್ರದಾಯಿಕ ಬದ್ಧತೆಯಲ್ಲೆ ಕಂಡುಕೊಳ್ಳುವುದರಿಂದ ಭೈರಪ್ಪನವರು ಅನೇಕ ಬಗೆಯಲ್ಲಿ ಪ್ರಶ್ನಿಸಲ್ಪಟ್ಟಿದ್ದಾರೆ.

ಸಾಂಸ್ಕೃತಿಕ ಘರ್ಷಣೆಯನ್ನು ಬಹಳ ಗಂಭೀರವಾಗಿ ಚಿತ್ರಿಸುವ ಲೇಖಕರು 'ಜೀವನ ಗತಿ'ಯ ಒಂದು ಲಯವನ್ನು ಗುರುತಿಸುವುದಾಗಿಲ್ಲ. ಈ ಐದೂ ಕೃತಿಗಳ ಅಂತ್ಯ 'ಚಲನ ರಹಿತ'ವಾಗಿದೆ. ಈ ಸಮಸ್ಯೆ ವಾಸ್ತವವೇ ಆದರೂ ಪರಿಹಾರ ಹೇಗೆಂಬ ಬಗ್ಗೆ ಕೃತಿ

ಮೌನವಾಗಿವೆ. ಈ ವಿಚಾರ ಅವರ ಮುಂದಿನ ಸಾಮಾಜಿಕ ಘರ್ಷಣೆಗಳ ಕೃತಿಗಳಿಗೂ ಅನ್ವಯಿಸುತ್ತವೆ.

ದೂರಸರಿದರು, ಗೃಹಭಂಗ, ಅನ್ವೇಷಣ, ಸಾಕ್ಷಿ, ತಂತು ಈ ಕೃತಿಗಳು ವ್ಯಕ್ತಿಯ ದೈಹಿಕ ಮತ್ತು ಮಾನಸಿಕ ಸಾವನ್ನು ಕುರಿತು ಬಿಂಬಿಸುತ್ತವೆ. ಬೌದ್ಧಿಕ ಅತಿರೇಕತೆ, ಸಾಮಾಜಿಕ ವ್ಯವಸ್ಥೆಯ ದುಷ್ಪರಿಣಾಮ, ಮನುಷ್ಯನ ಅನೀತಿ ಪ್ರಜ್ಞೆ ಮತ್ತು ರಾಜಕೀಯ ಭ್ರಷ್ಟತೆಯಂಥ ಅಂಶಗಳು ಈ ಬಗೆಯ ವಿಚಾರಕ್ಕೆ ಕಾರಣವಾಗುತ್ತವೆ. ಈ ಕೃತಿಗಳು ಸಮಕಾಲೀನ ಬದುಕಿನ ಎಲ್ಲ ದ್ವಂದ್ವಗಳು ಹಾಗೂ ಅಡಚಣೆಗಳನ್ನು ಅನಾವರಣಗೊಳಿಸುತ್ತಲೇ ಜೀವನಾನುಭವದ ಕೊರತೆಯನ್ನು ಶ್ರುತಪಡಿಸುತ್ತವೆ. ದೂರಸರಿದರು ಕೃತಿ 'ಅತಿವೈಚಾರಿಕತೆ'ಯ ಸ್ವರೂಪ ಮತ್ತು ಅದರ ಪರಿಣಾಮವನ್ನು ಕುರಿತ ಕಾದಂಬರಿ. ಆನಂದ–ವಿನುತೆ, ವಸಂತ–ಉಮೆಯರು ಶುದ್ಧ ಪ್ರೇಮಿಗಳು. ಅವರ ನಡುವೆ 'ಬೌದ್ಧಿಕ ಸಾಹಚರ್ಯ'ದ ತೀವ್ರತೆ ಹೆಚ್ಚಾಗಿ ಒಬ್ಬರನ್ನೊಬ್ಬರು ಅಗಲುತ್ತಾರೆ. ಇದೊಂದು ದುರಂತ ವಿಚಾರ. ಕಣವಿ ಮಹಾದೇವರು 'ದುರಂತ ಪಾತ್ರ'ಗಳೆಂದು ಹೇಳುತ್ತಾ, ವಿನುತೆಯನ್ನುಳಿದು ಯಾರೊಬ್ಬರು ಸಾಯದಿದ್ದರೂ, ಜೀವನ್ಮೃತರಾಗಿ ಬದುಕುತ್ತಾರೆ. ಪರಿಸ್ಥಿತಿಯ ಒತ್ತಡವನ್ನು ಧೈರ್ಯವಾಗಿ ಎದುರಿಸಿ ನಿಲ್ಲುವ ಎದೆಗಾರಿಕೆ ಇಲ್ಲದೆ ಈ ಅವಸ್ಥೆಗಿಳಿಯುತ್ತಾರೆಂದು ಗುರುತಿಸುತ್ತಾರೆ. ಕೃತಿಯ ಈ ಅಂಶವನ್ನು ಗಂಭೀರವಾಗಿ ಪ್ರಶ್ನಿಸುತ್ತಾರೆ ಮಲ್ಲಿಕಾರ್ಜುನ ಹಿರೇಮಠ. "ಪಾತ್ರಗಳು ಬೆಳೆಯಬಹುದಾದಂತಹ ಸಂದರ್ಭದಲ್ಲೂ, ಅವು ವಿಚಾರದ ಮೂಗಿನ ನೇರದತ್ತಲೇ ನೋಡುತ್ತವೆ. ವಿಚಾರಗಳನ್ನು ಭರಿಸುವ ಈ ಪಾತ್ರಗಳು ಸಜೀವವಾಗಿ ಕಂಗೊಳಿಸುವುದಿಲ್ಲ. ಅವು ಬದುಕಿನ ಸಂಕೀರ್ಣತೆಯಿಂದ, ಸಂವೇದನೆಯ ಸೂಕ್ಷ್ಮತೆಯಿಂದ ವಂಚಿತವಾಗುತ್ತವೆ. .....ಕಾದಂಬರಿಕಾರರು ವಿಚಾರಗಳನ್ನು ಜೀವನದರ್ಶದಲ್ಲಿ ಬೇರೂರಿಸಿ ಬೆಳೆಸಿದ್ದರೆ, ಅವರು ಹೇಳುವ ಮೌಲಿಕ ದ್ರವ್ಯದ ಆಳ ಅಗಲಗಳು ಹೆಚ್ಚಬಹುದಿತ್ತು" (ಸಹಸ್ಪಂದನ: ೧೪೩).

ಅಂದರೆ ವಾಸ್ತವ ವಿಚಾರದೊಂದಿಗೆ ಕೃತಿಕಾರನ ಆಶಯವೂ ಮುಖ್ಯವೆಂಬುದು ಇಲ್ಲಿ ವ್ಯಕ್ತವಾಗಿದೆ. ವಾಸ್ತವತೆಯ ನೇರ ನಿರೂಪಣೆಯ ಪರಿಣಾಮದಷ್ಟೇ ಮುಖ್ಯ 'ಕೃತಿಯ ಆಶಯ'ವೆಂಬುದನ್ನು 'ಆಧುನಿಕ ವಿದ್ಯಾಭ್ಯಾಸ'ದಿಂದ ರೂಪಿತವಾಗಿರುವ ವ್ಯವಸ್ಥೆ ಬಯಸುತ್ತಿದೆ.

ಶ್ರೀರಂಗರು ಈ ಕೃತಿಯನ್ನು ಮತ್ತೊಂದು ದೃಷ್ಟಿಯಿಂದ ವಿಮರ್ಶಿಸುತ್ತಾರೆ : "ಒಂದು ದೃಷ್ಟಿಯಿಂದ ಕಾದಂಬರಿ ಲೇಖನದಲ್ಲಿ ತೀರಾ ಹೊಸದು ಎನ್ನದಿದ್ದರೂ ದೊಡ್ಡ ಪ್ರಮಾಣದ ಪ್ರಯತ್ನ.... ಅನೇಕರಿಗೆ ಹಿಡಿಸಲಿಕ್ಕಿಲ್ಲ ಎಂಬುದಕ್ಕೆ ಕಾರಣ ಬರವಣಿಗೆಯ ನ್ಯೂನತೆಗಳಲ್ಲ, ಲೇಖಕರು ಬುದ್ಧಿಪೂರ್ವಕವಾಗಿ ಇಟ್ಟುಕೊಂಡ ದೃಷ್ಟಿ 'ಮನುಷ್ಯ ಜೀವನವನ್ನು ಬಾಧಿಸಿರುವುದು ಪ್ರೇಮ' ಎನ್ನುವಾಗ, ಸೃಷ್ಟಿ ಸಹಜವಾದ ಕಾಮವನ್ನು ತತ್ತ್ವಶಾಸ್ತ್ರದ ಉಪಾಧ್ಯಾಯರಾದ ಭೈರಪ್ಪನವರು ಕಡೆಗಣಿಸಿದ್ದಾರೆ. ಈ ಪ್ರೇಮವು ಯೌವನಾವಸ್ಥೆಯಲ್ಲಿಯೇ ಮೊದಲು ಮೂಡುವುದರ ಮಹತ್ವವನ್ನು ಅಲಕ್ಷ್ಯಮಾಡಿದ್ದಾರೆ. ಈ ಕಾರಣಕ್ಕಾಗಿ ವಸಂತನ ಪಾತ್ರ ರಮೆಯ ಪಾತ್ರದಷ್ಟು ಪ್ರಭಾವಶಾಲಿಯಾಗಲಿಲ್ಲವೇನೋ ಎಂಬ ಭಾವನೆ ಕಥೆಯನ್ನು ಓದಿ ಮುಗಿಸಿದ ಮೇಲೆ ಉಳಿಯುವುದು.

....... ವಿನುತೆಯ ಸಮಸ್ಯೆಯನ್ನು ಆಕೆಯ ಮರಣದಿಂದ ಬಿಡಿಸಿದ್ದು ಸಾಹಿತ್ಯದಲ್ಲಿ ಎಂದಿನಿಂದಲೂ ರೂಢವಾದ ಒಂದು ಸುಲಭೋಪಾಯ'' (ಸಹಸ್ಪಂದನ–೦೮).

ಈ ಮಹತ್ವದ ವಿಚಾರಗಳೊಂದಿಗೆ ಶ್ರೀರಂಗರು ಮತ್ತೊಂದು ಮಾತನ್ನು ಹೇಳುತ್ತಾರೆ: "Thesis is on love with question Mark". ಕೊನೆಗೂ ವಾಸ್ತವವೇನೆಂದು ಅರ್ಥವಾಗದೆ ಆನಂದ 'ಮನುಷ್ಯರನ್ನು ಒಂದಾಗಿಸದ ಕ್ರಿಯೆ' ಯಾವುದೆಂದು ಪುಸ್ತಕಗಳಲ್ಲಿ ಹುಡುಕುತ್ತಾ ಕೊರುವುದು 'ಜೀವನಾನುಭವ ರಹಿತ ವ್ಯಕ್ತಿ'ಯನ್ನು ಸೂಚಿಸುತ್ತದೆ.

'ಗೃಹಭಂಗ' ಮತ್ತು 'ಅನ್ವೇಷಣ' ಕೃತಿಗಳು ಕೂಡ ಇಂಥ ಪರಿಣಾಮದಿಂದ ತಲ್ಲಣಗೊಂಡ ವ್ಯಕ್ತಿ ಬದುಕನ್ನೇ ಹೇಳುತ್ತವೆ. ಭೈರಪ್ಪನವರ ಕೃತಿಗಳಲ್ಲೆಲ್ಲ ಹೆಚ್ಚು ವಾಸ್ತವ ಕೃತಿ ಎಂದು ಹೇಳಲಾಗಿರುವ ಗೃಹಭಂಗ ಇಡೀ ವ್ಯವಸ್ಥೆಯೊಂದಿಗೆ ಹೆಣ್ಣೊಬ್ಬಳು ಹೋರಾಡಿ ಬದುಕನ್ನು ರೂಪಿಸಿಕೊಳ್ಳುವ ಕಥನವಾಗಿದೆ. ಹುಲಿಯಂಥ ಕಂಠಿಜೋಯಿಸರ ಮಗಳಾದ ಈಕೆ ಕಡುಮೂರ್ಖ ಚೆನ್ನಿಗರಾಯನನ್ನು ಮದುವೆಯಾಗಿ ಸಂಕೀರ್ಣ ಬದುಕನ್ನು ಪ್ರವೇಶಿಸುತ್ತಾಳೆ. ಈ ವ್ಯವಸ್ಥೆಯ ಸ್ವರೂಪವನ್ನು ಕುರಿತು ರಾಮದಾಸ್ ವಿಶ್ಲೇಷಿಸುತ್ತಾರೆ :

"...... ವ್ಯಕ್ತಿ ಸ್ವಾರ್ಥ, ಕಾನೂನು ಬಗೆಗಿನ ಅಜ್ಞಾನ, ಮೂಢನಂಬಿಕೆ ಮತ್ತು ಮುಗ್ಧ ಮೌಢ್ಯಗಳಿವೆ. ಅಯ್ಯಾಶಾಸ್ತ್ರಿ, ಅಣ್ಣಾಜೋಯಿಸರ ಧಾರ್ಮಿಕ ಶೋಷಣೆ; ಶಿವೇಗೌಡ, ಸಿವಲಿಂಗೇಗೌಡ, ಕಾಶಿಂಬಡ್ಡಿ ಮತ್ತು ತಿಪಟೂರಿನಲ್ಲಿ ಮೂವತ್ತು ರೂಪಾಯಿಗೆ ಸಿಕ್ಕುವ ಒಂದು ಪಲ್ಲ ರಾಗಿಗೆ ಐವತ್ತು ಪಡಕೊಳ್ಳುವ ರಾಮಸಂದ್ರದ ವ್ಯಾಪಾರಿಗಳು–ಇವರ ಅಧಿಕಾರ ಸಾಮಾಜಿಕ ಹಾಗೂ ಆರ್ಥಿಕ ಶೋಷಣೆ; ಮತ್ತೆ ಮತ್ತೆ ಬಂದು ಕಾಡುವ ಪ್ಲೇಗು, ಬರ, ನಾಗರುಗಳ ಪ್ರಾಕೃತಿಕ ಶೋಷಣೆ ಮುಂತಾದುವೂ ಇವೆ'' (ಸಹಸ್ಪಂದನ : ೩೫೭).

ಹೇಗೋ ಈ ಅಸ್ತವ್ಯಸ್ತ ಕುಟುಂಬದಲ್ಲಿ ಹೊಂದಿಕೊಂಡು ಹೋಗುವ ನಂಜಮ್ಮನೊಂದಿಗೆ ಅಪ್ಪಣ್ಣಯ್ಯನ ಹೆಂಡತಿಯಾಗಿ ಸಾತು ಪ್ರವೇಶಿಸುತ್ತಾಳೆ. ಅವಳು ಸ್ವಲ್ಪ ಪ್ರತಿಭಟಿಸಿದಾಗ ಕುಟುಂಬ ವಿಘಟನೆಯಾಗುತ್ತದೆ. ಅತಿವಾಚಾಳಿಗಂಗಮ್ಮ, ಅಲಸಿಗಳಾದ ಚೆನ್ನಿಗರಾಯ ಅಪ್ಪಣ್ಣಯ್ಯರಿಂದಾಗಿ ಹುಟ್ಟಿದ 'ದುರಂತ'ದೊಂದಿಗೆ ನಂಜಮ್ಮನದು ನಿರಂತರ ಹೋರಾಟ ಭಂಗವಾದ 'ಗೃಹ'ವನ್ನು ಮತ್ತೆ ಮೇಲೆತ್ತಲು ಶ್ರಮಿಸಿದ ಆಕೆ ಪ್ರಕೃತಿ ವೈರುಧ್ಯವಾದ 'ಪ್ಲೇಗ್'ನ ಮಾರಕ ಧಾಳಿಗೆ ಸಿಕ್ಕು ತತ್ತರಿಸುತ್ತಾಳೆ. ಸುಖಕ್ಕಾಗಿ ದೀರ್ಘ ಹೋರಾಟ ಮಾಡಿದ ಆಕೆ ಮತ್ತು ದುರಂತಕ್ಕೆ ಬಲಿಯಾಗುವುದನ್ನು ಹೇಳುವ ಮೂಲಕ ಭೈರಪ್ಪನವರು 'ವಸ್ತು ನಿಷ್ಠ' ಜೀವನವನ್ನು ಸಹಜವಾಗಿ ಚಿತ್ರಿಸಿದ್ದಾರೆ. ಮಾಧವ ಕುಲಕರ್ಣಿ ಕಾದಂಬರಿಯ ಬಗ್ಗೆ ಕೆಲವು ಮೌಲಿಕ ಮಾತುಗಳನ್ನು ಹೇಳುತ್ತಾರೆ : "'ಗೃಹಭಂಗ'ದಲ್ಲಿ ವೈಚಾರಿಕತೆಯಿಂದ ದೂರವಾಗಿ, ಕೇವಲ ಪಾತ್ರ ಚಿತ್ರಣಕ್ಕೆ ತೊಡಗುತ್ತಾರೆ. ಹೀಗಾಗಿ ಕಾದಂಬರಿಯ ನಾಯಕಿಯಾದ ವಿಶ್ವನ ತಾಯಿ ನಂಜಮ್ಮ ಧೀರೋದಾತ್ತ ಪಾತ್ರವಾಗಿ ಮೂಡಿ ಬರುತ್ತಾಳೆ. ದಡ್ಡತನವನ್ನೇ ಮದುವೆಯಾದ ಅವಳ ಬಾಳು ದುರಂತದಲ್ಲಿ ಕೊನೆಗೊಳ್ಳುವುದು ಸಹಜವೆನ್ನಿಸಿದರೂ, ಅವಳ ಹೋರಾಟ ನಿಜವಾದ ದುರಂತ ನಾಯಕಿಯ ಹೋರಾಟವೇ ಆಗುತ್ತದೆ. ಭಯ ಮತ್ತು

ಕರುಣೆಗಳೆರಡೂ ಅವಳ ಪಾತ್ರದಲ್ಲಿ ಬೆರೆಯುವುದರಿಂದ, ಭೈರಪ್ಪ ನಮ್ಮ ಗ್ರಾಮ್ಯ ಜೀವನದಿಂದ ಮಹಾಕಾವ್ಯದ ಪಾತ್ರವೊಂದನ್ನು ಕಡೆದು ಹೊರತಂದಿದ್ದಾರೆ (ಸಹಸ್ಪಂದನ–೩೪೮). 'ಕಾನೂರು ಹೆಗ್ಗಡತಿ', 'ಮರಳಿ ಮಣ್ಣಿಗೆ', 'ಗ್ರಾಮಾಯಣ'ದಂಥ ಕಾದಂಬರಿಗಳ ಸಾಲಿಗೆ ಸೇರುವ ಈ ಕೃತಿ ಗ್ರಾಮ ಬದುಕಿನ ಮೂರ್ಖತನ, ನಿರ್ದಯತೆ, ಹಟಮಾರಿತನಗಳನ್ನು ವ್ಯಕ್ತಪಡಿಸುತ್ತದೆ.

ಗೃಹಭಂಗದಲ್ಲಿ ಕೊನೆಗೆ ರಾಮಸಂದ್ರದಿಂದ ಹೊರಹೋದ ವಿಶ್ವನಾಥ ಬದುಕನ್ನು ವಿಶ್ಲೇಷಿಸಿರುವ ಕೃತಿ ಅನ್ವೇಷಣ. ಒಂದೆಡೆ ನಿಲ್ಲದೆ ಅಲ್ಲಿಂದಿಲ್ಲಿಗೆ, ಮತ್ತೊಂಡೆದೆ, ಮಗದೊಂದೆಡೆ ಹೀಗೆ ಸದಾ ಸುತ್ತುತ್ತಲೇ ಇರುವ ವಿಶ್ವನಾಥನೊಂದಿಗೆ ಬದುಕಿನ ಅನ್ವೇಷಣೆಯೂ ನಡೆಯುತ್ತದೆ. ಈ ಅಂಶವನ್ನು ಆಧರಿಸಿ ಕುರ್ತಕೋಟಿಯವರು ಕೃತಿಯ ವೈರುಧ್ಯವನ್ನು ಗುರುತಿಸುತ್ತಾರೆ. "..ವಿಶ್ವನಾಥನ ಅನಾಥ ಪ್ರಜ್ಞೆ ಮತ್ತು ಅವನ ಜೀವನದ ಪರಕೀಯತೆ ತಂದೊಡ್ಡುವ ದೊಡ್ಡ ಅಪಾಯವೆಂದರೆ ಭಾವನಾವಿಷ್ಟತೆ. ವಿಶ್ವನಾಥನ ನಿರ್ಲಿಪ್ತತೆಯಿಂದಾಗಿ ಅವನಲ್ಲಿ ಈ ಗುಣ ಬಾರದಂತೆ ಲೇಖಕರು ನೋಡಿಕೊಂಡಿದ್ದಾರೆ. ಅವನು ಹೆಚ್ಚು ಆಸಕ್ತನಾಗಿದ್ದ ವ್ಯಕ್ತಿಗಳೆಂದರೆ ಮಾಲತಿ ಬಾಯಿ ಮತ್ತು ಸುನಂದಾ. ಎರಡನೆಯವಳು ಅವನ ಮದುವೆಯ ಹೆಂಡಿತಿಯಾದ್ದರಿಂದ ಎರಡನೆಯ ಸಾರೆ ಅವಳನ್ನು ಕಾಣಲು ಹೋಗುತ್ತಾನೆ. ಮಾವನಿಂದ ಅವಮಾನಿತನಾಗಿ ತಿರುಗಿ ಹೋಗುತ್ತಾನೆ. ವಿಶ್ವನಾಥ ಎರಡು ಸಾರೆ ಆತ್ಮಹತ್ಯೆಗೆ ಪ್ರಯತ್ನಿಸಿ, ಅದು ಬೇಡವೆನಿಸಿ ಜೀವನದತ್ತ ತಿರುಗುತ್ತಾನೆ... ವಿಶ್ವನಾಥನ ವ್ಯಕ್ತಿತ್ವದಲ್ಲಿ ನಿಷೇಧಾತ್ಮಕವಾದ ಗುಣಗಳು – ಹಟ, ಬಂಡುಗಾರಿಕೆ, ನಿರ್ಲಿಪ್ತತೆ ಮೊದಲಾದವುಗಳು ಕಾಣುತ್ತವೆಯೇ ಹೊರತು ತಾಯಿ ನಂಜಮ್ಮನಂತೆ ಎಂಥ ವಿಷಮತೆಯ ಮಧ್ಯದಲ್ಲಿಯೂ ಬದುಕಿ ಉಳಿಯಬಲ್ಲ ಜೀವನಶ್ರದ್ಧೆಯಲ್ಲ. ಅವನು ಎದುರಿಸುವ ಪರಿಸ್ಥಿತಿ ವಿಕಟವಾದದ್ದೇ'' (ಸಹಸ್ಪಂದನ – ೩೫೦). ಜೀವನದೊಂದಿಗೆ ಮಿಳಿತಗೊಳ್ಳಲೆಂದೆಣಿಸುವ ಪಾತ್ರಗಳಿಂದ ವಿಶ್ವನಾಥ ತಪ್ಪಿಸಿಕೊಳ್ಳುತ್ತಾನೆ. ಆದರೆ ಕೊನೆಗೆ ಜೀವನವು ಅವನನ್ನು ತಿರಸ್ಕರಿಸುತ್ತದೆ. ಬದುಕಿನ ಸ್ವರೂಪಕ್ಕೆ ಹೆಚ್ಚು ಮಹತ್ವ ಕೊಟ್ಟಿರುವ ಭೈರಪ್ಪನವರು 'ಜೀವನದ ಸ್ವೀಕರಣ ನಿರಾಕರಣ'ದ ಮೂಲಕ ಸಮಸ್ಯೆಯನ್ನು ವಿವರಿಸಿದ್ದಾರೆ. ವೈಚಾರಿಕ ವಿಘಟನೆಯು ಬದುಕನ್ನು ಎಂದಿಗೂ ಪೂರ್ಣಗೊಳಿಸುವುದಿಲ್ಲ. ಅನುಭವದ ಮೂಲಕ ಜೀವನದಲ್ಲಿ ಮಾಗದೆ ಸದಾ ಸಂಚಾರಿಯಾದ ವಿಶ್ವನಾಥನಂತಹವರು ಸಮಕಾಲೀನ ಬದುಕಿನಲ್ಲಿದ್ದಾರೆ. ಇಂಥ ಒಂದು ಗಂಭೀರ ಸಮಸ್ಯೆಯನ್ನು ಒಳಗೊಂಡಿರುವ 'ಅನ್ವೇಷಣ' ಈ ಹಿಂದಿನ ಕಾದಂಬರಿಗಳಿಗಿಂತ ವಿಶಿಷ್ಟವಾಗಿದೆ. ಈ ಕೃತಿಯನ್ನು ಸತ್ಯ, ಸುನಂದೆಯರ ಮೂಲಕ ವೀಕ್ಷಿಸಿದಾಗ ಸ್ತ್ರೀ ಸ್ವಾತಂತ್ರ್ಯದ ನೆಲೆಗಳು ಕಂಡುಬರುತ್ತವೆ.

ಅನ್ವೇಷಣದ ನಂತರ ಭೈರಪ್ಪನವರ ಅಭಿವ್ಯಕ್ತಿ ಕ್ರಮ ಬದಲಾಯಿತು. ವಾಸ್ತವ ಬದುಕನ್ನು ಮಾನಸಿಕ ವಿಚಾರಗಳಿಂದ ಚಿಂತನಾಪೂರ್ಣವಾಗಿ ವೀಕ್ಷಿಸುವ ಅಂತರಿಕ ಶಿಸ್ತನ್ನು ಬೆಳೆಸಿಕೊಂಡಿದ್ದಾರೆ. ಹಾಗಾಗಿ 'ಅನ್ವೇಷಣ'ವನ್ನು ಭೈರಪ್ಪನವರ ಕಾದಂಬರಿಗಳ ಎರಡನೆಯ ಆಯಾಮವೆಂದು ಗುರುತಿಸಬಹುದು. 'ನೆಲೆ' ಕಾದಂಬರಿಯು ಸಂಪೂರ್ಣವಾಗಿ ಮಾನಸಿಕ ಲೋಕದಲ್ಲೇ ರೂಪುಗೊಂಡಿರುವಂಥದ್ದು. ಜವರಾಯಿ ಸತ್ತ ಮೇಲೆ ಅವನ ದಿನಚರಿಯ ಮೂಲಕ ಅವನ ಬದುಕಿನ ಸ್ವರೂಪವನ್ನು

ಕಟ್ಟಿಕೊಡುವುದು ಅತ್ಯಂತ ವಿಶಿಷ್ಟ ಈ ಪ್ರಕ್ರಿಯೆ 'ಪರ್ವ' ಮತ್ತು 'ಸಾಕ್ಷಿ'ಗಳಲ್ಲಿಯೂ ಇದೆ. ಶಾಮಸುಂದರ ಬಿದರಕುಂದಿಯವರು ಇದನ್ನು 'ಯಶಸ್ವಿ ತಂತ್ರ'ವೆಂದು ಕರೆಯುತ್ತಾರೆ.

"ಅನ್ವೇಷಣೆ'ಯ ನಂತರ ಬೈರಪ್ಪನವರು ಘಟನಾ ಪ್ರಧಾನ ಅನುಭವಗಳ ನಿರೂಪಣೆಯ ಕಡೆಗೆ ಹೊರಳಿದ್ದು, ಅವರ ಕಾದಂಬರಿಯಲ್ಲಿಯು ಮಹತ್ವದ ಬೆಳವಣಿಗೆಯೂ ಆಗಿದೆ. ಮುಖ್ಯ ಪಾತ್ರಗಳ ಪ್ರಜ್ಞೆಯನ್ನು ಕೇಂದ್ರವಾಗಿಟ್ಟುಕೊಂಡು ಮನಸ್ಸು–ವಿಚಾರ–ಕ್ರಿಯೆ ಮತ್ತು ಪ್ರಸಂಗೋಚಿತ ಎದುರು ಬೀಳುವ ಅನುಭವಕ್ಕೆ ಆ ಪಾತ್ರ ನೀಡುವ ಪ್ರತಿಕ್ರಿಯೆಗಳನ್ನು ಒಟ್ಟೊಟ್ಟಿಗೆ ಗ್ರಹಿಸಿ, ನಿರೂಪಿಸಬಲ್ಲ ಪ್ರಜ್ಞಾಪ್ರವಾಹ ತಂತ್ರ, ಕಾದಂಬರಿಕಾರನ–ವ್ಯಕ್ತ–ಸುಪ್ತ ಆಶಯಗಳನ್ನು ಸಾಕಷ್ಟು ವಿವರವಾಗಿ ವಿಶ್ಲೇಷಿಸಬಲ್ಲ ಸಾಧನೆಯಾಗುತ್ತದೆ. ಅಮೂರ್ತ ವಿಚಾರ ಮತ್ತು ಕಲ್ಪನೆಗಳಿಗೆ ಮೂರ್ತರೂಪ ಕೊಡುವುದಕ್ಕೂ; ಕಾದಂಬರಿಕಾರನ ಪರ–ವಿರೋಧ ಧೋರಣೆಗಳನ್ನು ಕಾದಂಬರಿಯಲ್ಲೇ ನಿರ್ಮಾಣಗೊಳ್ಳುವ ಸನ್ನಿವೇಶದ ನಡುವೆ ಇಟ್ಟು ಪರೀಕ್ಷಿಸುವುದಕ್ಕೂ, ಒಟ್ಟನಲ್ಲಿ ಕಾದಂಬರಿಯ ಆಶಯ, ನಂಬಲರ್ಹ ವಸ್ತುವನ್ನಾಗಿಸುವುದಕ್ಕೂ ಈ ತಂತ್ರ ಹೆಚ್ಚು ಸಹಾಯಕ" (ಕರ್ನಾಟಕ ಭಾರತಿ –೧೭–೪ : ೨೬–೨೭). ಹೀಗೆ ಹೊಸ ಆಯಾಮವನ್ನು ಪಡೆದುಕೊಂಡು 'ನೆಲೆ' ಯನ್ನು ವಿಶೇಷ ದೃಷ್ಟಿಕೋನದಿಂದಲೇ ನೋಡಬೇಕಾಗುತ್ತದೆ–ಅಂದರೆ ವಾಸ್ತವ ಬದುಕು ಮತ್ತು ಮನುಷ್ಯನ ಮಾನಸಿಕ ಜಗತ್ತು ಮಲ್ಲೇಪುರಂ ಜಿ. ವೆಂಕಟೇಶ್ ಅವರು ಈ ಕೃತಿಯನ್ನು ಈ ಎರಡು ಅಂಶಗಳ ಮೂಲಕ ವಿಮರ್ಶಿಸುತ್ತಾರೆ : "..... ವಾಸ್ತವ ಬದುಕು' ಎಂಬುದು ಆಯಾವ್ಯಕ್ತಿಗಳು ಕಂಡುಂಡ ಬದುಕಿನ ತೆಳುನೋಟವಾದರೆ; ಇನ್ನೊಬ್ಬನ ಸಾಕ್ಷಿ ಕಣ್ಣಿನಲ್ಲಿ ನೋಡುವುದು 'ಮಾನಸಿಕ ಜಗತ್ತು'. ಈ ಮಾನಸಿಕ ಜಗತ್ತು, ವ್ಯಕ್ತಿಗಳ ಆಂತರಿಕ ಇರವನ್ನು ಕಾಣಬಲ್ಲದು. ಈ 'ಇರವು' ಅವನು ಕಾಣುವ 'ಅರಿವಿ'ನಲ್ಲಿರುತ್ತದೆ. ಅರಿವು ಮತ್ತು ಇರವುಗಳ ದೂರವನ್ನೇ ಮಾನಸಿಕ ಜಗತ್ತು ಮತ್ತು ವಾಸ್ತವ ಬದುಕಿನ ಅಂತರವನ್ನು ಪ್ರತಿಬಿಂಬಿಸುತ್ತದೆ."

'ನೆಲೆ'ಯಲ್ಲಿ ಕಾಣುವ ವಾಸ್ತವ ಬದುಕಿಗೆ ಕುಮಾರ, ಮಾಲತಿ, ಸುಬ್ಬಲಕ್ಷ್ಮಿ, ರಾಮು, ಗುಂಡಪ್ಪ ಇವರು ಉದಾಹರಣೆಯಾದರೆ; ಮಾನಸಿಕ ಜಗತ್ತಿಗೆ ಕಾಳಪ್ಪ, ಜವರಾಯಿ, ಪಾರ್ವತಿ ಇವರು ಉದಾಹರಣೆಯಾಗುತ್ತಾರೆ" (ಬೈರಪ್ಪಾಭಿನಂದನಾ–೭೮). "ನನ್ನನ್ನು ಹುಟ್ಟಿಸಿ ಅಂತ ನಾನು ಕೇಳಿದ್ದೇನೇ ನಿಮ್ಮನ್ನ? ಹುಟ್ಟಿಸಿದ್ದು ನಿಮ್ಮ ಮೊದಲ ತಪ್ಪು"–ಎಂದು ಕುಮಾರ ಹೇಳಿದ ಮಾತಿನಿಂದ ಮೊದಲಾಗಿ ಜವರಾಯಿಯ ಸಾವಿನವರೆಗೂ ಕೃತಿ ಮೂರ್ತ ಅಮೂರ್ತದಲ್ಲಿ ಗಂಭಿರವಾಗಿ ಬೆಳೆಯುತ್ತದೆ. ಕಾರಂತರ 'ಅಳಿದ ಮೇಲೆ'ಯಂತೆ ಇಲ್ಲಿಯೂ ಜವರಾಯಿಯ ದಿನಚರಿಯಿಂದ ಕಾಳಪ್ಪ ಅವನ ಬದುಕನ್ನು ಮೂರ್ತಗೊಳಿಸುತ್ತಾನೆ. ಬಿದರಕುಂದಿಯವರು ಇದನ್ನು 'ಕಾಳಪ್ಪನ ಪರೀಕ್ಷೆ' ಎನ್ನುತ್ತಾರೆ: "ಒಂಟಿತನ, ಲೈಂಗಿಕ ಹಸಿವು, ಸಂತಾನದ ಹಂಬಲ, ಸಾವಿನ ನಿಗೂಢತೆಯಂತಹ ವೈಯಕ್ತಿಕ ಸಮಸ್ಯೆಗಳ ಸುಳಿಯಲ್ಲಿರುವ ಕಾದಂಬರಿಯ ಇತರ ಪಾತ್ರಗಳ ಸಫಲತೆ ವಿಫಲತೆಯ ಬೆಳಕಿನಲ್ಲಿ ಕಾಳಪ್ಪ ತನ್ನನ್ನು ಪರೀಕ್ಷಿಸಿಕೊಳ್ಳುತ್ತಾನೆ. ಈ ಆತ್ಮನಿರೀಕ್ಷಣೆಯ ಪ್ರತಿಫಲನಕ್ಕೆ ಪ್ರಜ್ಞಾಪ್ರವಾಹ ತಂತ್ರ ಬೆಂಬಲವಾಗಿದೆ. ಸತ್ತು ಹೋದ ಜವರಾಯಿಯ ಮಗ ಕುಮಾರ; ಅವನ ಆಧುನಿಕ ಪ್ರವೃತ್ತಿಯ ಹೆಂಡತಿ; ಜವರಾಯಿಯ ಮೊದಲ

ಹೆಂಡತಿ ಸುಬ್ಬಲಕ್ಷ್ಮಿ & ಪ್ರೇಯಸಿ ಪಾರ್ವತಿ; ಇವರೆಲ್ಲರ ನೆನಪಿನಿಂದ ಉದ್ಭವಿಸುವ ಸಂಗತಿಗಳು ಹಾಗೂ ವರ್ತಮಾನದ ನಡವಳಿಕೆಯಿಂದ ಹುಟ್ಟುವ ಪ್ರತಿಕ್ರಿಯೆಗಳು ಕಾಳಪ್ಪನ ವೀಕ್ಷಣೆಗೆ ಒಳಗಾಗುತ್ತವೆ. ಅವರವರ ದೃಷ್ಟಿಯಲ್ಲಿ ಹಣ, ಸಂತಾನ[ದ ಬೇಕು–ಬೇಡಗಳ ಒದ್ದಾಟ]; ಲೈಂಗಿಕ ಆಸೆ, ಸಂಬಂಧ; ಪ್ರೀತಿ – ಮೋಹ, ಸಂಸಾರದ ಜವಾಬ್ದಾರಿ–ಇವು ವಹಿಸಿದ ಪಾತ್ರ ಏನೇನು ಎಂಬುದರ ವಿವೇಚನೆ ಕಾದಂಬರಿಯುದ್ದಕ್ಕೂ ಹರಡುತ್ತದೆ. ಜವರಾಯಿ ಬರೆದಿಟ್ಟ ಡೈರಿ, ಪಾರ್ವತಿಯ ಆತ್ಮವೃತ್ತಾಂತದ ಪುಟಗಳು ; ಸ್ವತಃ ಕಾಳಪ್ಪನೇ ಭೆಟ್ಟಿಯಾದಾಗ ಕಾಣುವ ಪಾತ್ರಗಳ ಪ್ರವೃತ್ತಿ – ಈ ಒಂದೊಂದು ಜವರಾಯಿ ಸಾಧಿಸಿದ ಜೀವನದ 'ನೆಲೆ'ಯನ್ನು ಸ್ಪಷ್ಟಪಡಿಸಿದಂತೆ, ಕಾಳಪ್ಪನಿಗೂ ಅವನದೇ ಸ್ವಂತ ನೆಲೆಯೊಂದನ್ನು ಕಲ್ಪಿಸಿಕೊಳ್ಳಲು, ನಿಶ್ಚಯಿಸಿಕೊಳ್ಳಲು ಸೂಚನೆ ನೀಡುತ್ತದೆ'' (ಕರ್ನಾಟಕ ಭಾರತಿ : ೨೮).

ನಮ್ಮ ಹುಟ್ಟೊಂದನ್ನುಳಿದು ಮಿಕ್ಕ ಬದುಕು, ಸಾವಿನ ನೆಲೆಗಳನ್ನು ರೂಪಿಸಿಕೊಳ್ಳುವುದು ನಮ್ಮ ಕೈಯಲ್ಲಿಯೇ ಇದೆ ಎಂಬ ಅಂಶವು ಈ ಕಾದಂಬರಿಯಲ್ಲಿದೆ. ಈ ಹಿನ್ನೆಲೆಯಲ್ಲಿ ಜವರಾಯಿಯ ಸಾವು ಪ್ರತಿಯೊಬ್ಬರೂ ತಮ್ಮತಮ್ಮ ಬದುಕಿನ ನೆಲೆಗಳನ್ನು ಕಂಡುಕೊಳ್ಳುವುದಕ್ಕೆ ಕಾರಣವಾಗುತ್ತದೆ. ಅಲ್ಲದೆ ಮಾನವ ಸಂಬಂಧಗಳ ಮೂಲ ನೆಲೆಯನ್ನು ಕೂಡ ಗುರುತಿಸುವುದು ಗಮನಾರ್ಹ. ಮಲ್ಲೇಪುರಂ ಜಿ. ವೆಂಕಟೇಶ್ 'ನೆಲೆ'ಯ ಮುಖ್ಯ ಕಾಳಜಿಯನ್ನು ಕುರಿತು ಹೇಳುವುದು ವಿಶಿಷ್ಟವಾಗಿದೆ. ೧. ನಾವು ಪರಿಸರದಲ್ಲಿ ಬದುಕಿದ್ದೇವೆ. ತಮ್ಮ ಬದುಕು ಒಂಟಿಯಲ್ಲ. ಬದುಕಬಹುದೆಂಬ ಭಾವ ಮೊದಲನೆಯದು. ೨. ನಕ್ಷತ್ರ ನೋಡೋದು– ನಕ್ಷತ್ರದ ಹುಟ್ಟಿನಷ್ಟೆ ಮನುಷ್ಯನ ಹುಟ್ಟನ್ನು ಪ್ರಶ್ನಿಸಿಕೊಂಡು ಸಾವು ಅನ್ನುವುದರ ಅರ್ಥವೇನು? ವ್ಯಕ್ತಿಗತ ಸಾವು, ಮೌಲ್ಯಗಳ ಸಾವು, ಇವುಗಳ ಅಂತರವನ್ನು ತೆರೆದು ಇಟ್ಟು ನೋಡಿಕೊಳ್ಳುವಂತೆ ಭೈರಪ್ಪನವರು ಓದುಗರನ್ನು ಮುಖಾಮುಖಿಯಾಗಿಸುತ್ತಾರೆ. ವಾಸ್ತವದ ಅಥವಾ ಚಿರವಾಸ್ತವದ ಈ ಬದುಕಿನೊಳಗೆ ನೇರವಾಗಿ ನಮಗೆ ಕಾಣದ, ಕಾಣುವ ಕಣ್ಣಿದ್ದರೆ ಕಾಣುವ ವಿವರಗಳೂ ಇವೆ. ಒಂದಕ್ಕೂ ಮತ್ತೊಂದಕ್ಕೂ ತರ್ಕಾತರ್ಕ್ಯದ ನಿಲುವುಗಳು ಇವೆ. ಅವುಗಳಿಗೆ ತಮ್ಮದೇ ಆದ 'ನೆಲೆ'ಗಳಿರುವುದೂ ನಿಜ. ಈ 'ನಿಜದ ನೆಲೆ'ಗಳ ಹುಡುಕಾಟ ನಡೆಯುವುದೇ ಈ ಕಾದಂಬರಿಯ ಅಂತರಿಕ ಶಿಸ್ತು'' (ಭೈರಪ್ಪಾಭಿನಂದನಾ –೮೧). ಇದುವರೆಗೂ ಓದಿನ ವ್ಯಾಪ್ತಿಯಲ್ಲಿ ಸಾಗಿ ಒಂದು ಬಗೆಯ 'ಅತಿ ವೈಚಾರಿಕತೆ'ಯಿಂದ ನಿರಾಶೆಯನ್ನು ತಂದು ಮುಗಿಯುತ್ತಿದ್ದ ಕಾದಂಬರಿಗಳಿಗಿಂತ ನೆಲೆ ಭಿನ್ನವಾದುದು. ಇಲ್ಲಿನ ವೈಚಾರಿಕತೆ ಒಬ್ಬ ಜವಾಬ್ದಾರಿಯುತ 'ವ್ಯಕ್ತಿ'ಯ ಬದುಕಿನಿಂದ ಅನಾವರಣಗೊಳ್ಳುವುದಾಗಿದೆ. ನೆಲೆಯ ನಂತರದ ಕಾದಂಬರಿಗಳೆಲ್ಲವೂ ಈ ಜಾಡಿನಲ್ಲೆ ರೂಪುಗೊಂಡಿದೆ.

ಮನುಷ್ಯ ಪ್ರಜ್ಞೆಯಲ್ಲಿ ಹುದುಗಿರುವ ನೀತಿಯ ಬೇರುಗಳನ್ನು ಶೋಧಿಸುವಲ್ಲಿ 'ಸಾಕ್ಷಿ' ಮುಖ್ಯವಾದುದು. ಪುರಾಣ ಮತ್ತು ವಾಸ್ತವ ಬದುಕಿನ ಗೋಚರತೆಯನ್ನು ಕೂಡಿಸಿ ಸುಳ್ಳು–ಸತ್ಯಗಳಂಥ ಅಂಶಗಳನ್ನು ಕುರಿತು ವಿಶ್ಲೇಷಿಸುತ್ತಾರೆ. ವ್ಯಾಸರಾಯ ಬಲ್ಲಾಳರು ಈ ಕೃತಿಯ ಕಾಳಜಿಯನ್ನು ಕುರಿತು ಹೇಳುತ್ತಾರೆ : "... 'ಸಾಕ್ಷಿ' ಕಾಮದ ಹಿನ್ನೆಲೆಯಲ್ಲಿ ವ್ಯಾಪಕವಾಗಿ ಜೀವನ

ಮೌಲ್ಯಗಳನ್ನು ಶೋಧಿಸುತ್ತ ನೀತಿಗಳ ಕಲ್ಪನೆಗೆ ಅಂತರಂಗದ ಸಾಕ್ಷಿ ಪ್ರಜ್ಞೆ ಎಷ್ಟು ಕಾರಣ, ಅದರ ವೈಯಕ್ತಿಕ ಹಾಗೂ ಸಾಮಾಜಿಕ ಆಯಾಮಗಳೇನು ಎಂಬುದರ ಬಗ್ಗೆ ಓದುಗರ ಜಿಜ್ಞಾಸೆಯನ್ನು ಕೆರಳಿಸುತ್ತದೆ. ... ಮೃತ್ಯುವಿನ ಬಗ್ಗೆ ಭಾರತೀಯ ಕಲ್ಪನೆಯಲ್ಲಿ ಅಡಕವಾಗಿರುವ 'ಮಿತ್'ಅನ್ನು ಭೈರಪ್ಪನವರು ಸಾಂಕೇತಿಕವಾಗಿ 'ಸಾಕ್ಷಿ'ಯಲ್ಲಿ ಬಳಸಿಕೊಂಡಿದ್ದಾರೆ. ಯಮಧರ್ಮರಾಜನನ್ನು ಸಾಕ್ಷಿಪ್ರಜ್ಞೆಯು ಅಧಿದೇವತೆಯಾಗಿ ಕಾದಂಬರಿಯಲ್ಲಿ ಬಳಸಿಕೊಂಡಿರುವುದು ಇಲ್ಲಿನ ಪಾತ್ರಗಳನ್ನು ಕುರಿತು ವೈಚಾರಿಕ ಚಿಂತನೆಗಷ್ಟೇ ಅಲ್ಲ, ಬದುಕಿನ ಮೀಮಾಂಸೆಗೇ ಸೂಕ್ತವೆಂದು ಕಾಣುವಂತಿದೆ. ಕಾರಣ ಜೀವನದ ಗತಿ, ಗಮ್ಯಗಳ ನಿರ್ದೇಶನದಲ್ಲಿ ನಿಯತಿಯ ನೆನಪು ತಂದುಕೊಟ್ಟ ಸುಳ್ಳು ಸತ್ಯಗಳ ಮೀಮಾಂಸೆಗೆ ಕಾರಣವಾಗುವ ಪ್ರಮುಖ ಸತ್ಯ–ಮೃತ್ಯು. ಭಾರತೀಯ ಸಾಮಾಜಿಕ ಸಂದರ್ಭದಲ್ಲಂತೂ ಪರಂಪರೆಯಿಂದ ಪ್ರಭಾವಿತವಾದ ಇಹ–ಪರಗಳ ವಿವೇಚನೆಯಲ್ಲಿ ಸಾವಿಗೆ ಇನ್ನಷ್ಟು ಮಹತ್ವ. ಇಲ್ಲಿ ಕಾದಂಬರಿ ಆರಂಭವಾಗುವುದೇ ಈ ತಾತ್ತ್ವಿಕ ಆಯಾಮದ ಒಂದು ಮುಖವನ್ನು ಪ್ರದರ್ಶಿಸುವುದರಿಂದ'' (ಅಂಕಣ: ೧, ೨). 'ಕಾಮ' ಏನೆಲ್ಲ ಹೌದೊ, ಮಿತಿಮೀರಿದರೆ ಅದೇ ಏನೆಲ್ಲಕ್ಕೂ ಕಾರಣವಾಗುತ್ತದೆ. 'ಸ್ವೇಚ್ಛಾಚಾರ'ತೆಯ ಬದುಕನ್ನು ನಾಶಪಡಿಸುತ್ತದೆ ಎನ್ನುತ್ತಾರೆ ಮಲ್ಲೇಪುರಂ ಜಿ. ವೆಂಕಟೇಶ್ : "…. ಕಾಮ ಬದುಕಿನ ಅಗತ್ಯವೂ ಹೌದು. ಆದರೆ, 'ಕಾಮ'ವೇ ವಿಜೃಂಭಣೆಗೊಳ್ಳುವಾಗ ಬದುಕು ಸತ್ತು ಹೋಗುತ್ತದೆ. ಕಾಮ ಮತ್ತು ಬದುಕಿನ ಸಂಬಂಧ ತೀರಾ ಸೂಕ್ಷ್ಮದ್ದು..... ನಮ್ಮ ಕಾಲದ ಸಾಮಾಜಿಕ ಬದುಕಿನ ಈ ಕಾಮದ ವಿಜೃಂಭಣೆಯನ್ನು ಅದರ ಮೂಲಕ ತಲೆಯೆತ್ತುವ ಸುಳ್ಳುಗಳ, ವಿಕೃತಗೊಂಡ ಆಂತರಿಕ ಧರ್ಮದ ಸ್ವರೂಪವನ್ನು ಕಾದಂಬರಿ ಬಯಲು ಮಾಡುತ್ತದೆ'' (ಭೈರಪ್ಪಾಭಿನಂದಾನಾ – ೨೪) . 'ಒಳಗಿನ ಸಾಕ್ಷಿಯನ್ನೇ ಮುಚ್ಚುವ ಸುಳ್ಳಿನ ಜೀವನ' ಮಂಜಯ್ಯನದು. ಬದುಕಿರುವಾಗ ಮಾತ್ರವಲ್ಲ, ಸತ್ತು ಪ್ರೇತಲೋಕಕ್ಕೆ ಹೋದ ಮೇಲೂ ಯಮನ ಸನ್ನಿಧಿಯಲ್ಲೂ ಸುಳ್ಳು ಹೇಳುತ್ತಾನೆ.

ಸಮಕಾಲೀನರಾಗಿ ಮಹತ್ವದ ಲೇಖಕರಾದ ಭೈರಪ್ಪನವರ ಸಾಂಸ್ಕೃತಿಕ ಕಾಳಜಿಗಳನ್ನು ಆಧರಿಸಿ ಆಮೂರರು ಈ ಕೃತಿಯ ಕೆಲವು ಅಸಂಗತ ವಿಚಾರಗಳನ್ನು ಗುರುತಿಸುತ್ತಾರೆ. ತನ್ನ ಹೆಂಡತಿಯೊಡನೆ ಅಕ್ರಮ ಸಂಬಂಧ ಹೊಂದಿ, ಮಗಳನ್ನು ಕೈಬಿಟ್ಟ ಮಂಜಯ್ಯನ ಪರವಾಗಿ ಪರಮೇಶ್ವರನು ಸಾಕ್ಷಿ ಹೇಳುವುದು ಒಂದು ಭ್ರಮೆ. ಧನಪಿಶಾಚಿ ನಾಗಪ್ಪನ ಶವದೊಂದಿಗೆ ಆರೂವರೆ ಲಕ್ಷ ರೂಗಳನ್ನಿಟ್ಟು ಸುಟ್ಟುಬಿಡುವ ಅಳಿಯ ರಾಮಕೃಷ್ಣನ ಕ್ರಿಯೆ ಅತಿರೇಕವಾಗಿದೆ. ಹೀಗೆ ಹೇಳಿದ ಮೇಲೆ "..... ಈ ಕಾದಂಬರಿಯ ಚೌಕಟ್ಟು ಬೇತಾಳನ ಕಥೆಗಳನ್ನು ನೆನಪಿಗೆ ತಂದುಕೊಡುತ್ತದೆ. ಪ್ರೇತಲೋಕದಲ್ಲಿ ಯಮನ ಉಪಸ್ಥಿತಿಯಲ್ಲಿ ಪ್ರಾರಂಭವಾಗುವ ಕಥೆ ಮತ್ತೆ ಅಲ್ಲಿಗೇ ಬಂದು ಮುಕ್ತಾಯವಾಗುತ್ತದೆ. ಮಾನವ ಜೀವನವನ್ನು ಅರಿಯಲು ಅದನ್ನು ಮೀರಿದ ಅತಿಮಾನುಷ ಪರಿಪ್ರೇಕ್ಷ್ಯ ಅವಶ್ಯಕವೆಂಬುದು ಕಾದಂಬರಿಯ ಧೋರಣೆಯಾದಂತಿದೆ'' (ಅರ್ಥಲೋಕ : ೧೧೧). 'ಪ್ರಾಮಾಣಿಕತೆ' ಬದುಕಿನಲ್ಲಿ ಲುಪ್ತವಾಗಿರುವುದನ್ನು ಭೈರಪ್ಪನವರು ಮತ್ತೆ ಮತ್ತೆ ಗುರುತಿಸುತ್ತಾರೆ. ಮಂಜಯ್ಯನ ಮರಣಾನಂತರ ರಾಮಕೃಷ್ಣನ ಮಗ ಗಣೇಶ ಮತ್ತೊಬ್ಬ ಮಂಜಯ್ಯನಾಗುವುದು 'ಮನುಷ್ಯ ದೌರ್ಬಲ್ಯ'ಗಳ ನಿರಂತರತೆಯನ್ನು ಧ್ವನಿಸುತ್ತದೆ.

'ಅಂಚು' ಮತ್ತು 'ನಿರಾಕರಣ' 'ಮಾನಸಿಕ ಚಿಂತೆ'ಯಿಂದ ಬಳಲುತ್ತಿರುವ ವ್ಯಕ್ತಿಗಳ ಕಥೆ. ಇದುವರೆಗೂ ಸಾಮಾಜಿಕ ಹಿನ್ನೆಲೆಯಲ್ಲಿ ಕೌಟುಂಬಿಕ ಸ್ವರೂಪವನ್ನು ವಿವರಿಸುತ್ತಿದ್ದ ಲೇಖಕರು ಇಲ್ಲಿ ಒಬ್ಬ ವ್ಯಕ್ತಿಯ ಮಾನಸಿಕ ತಳಮಳ ಮತ್ತು ಪರಿಣಾಮಗಳನ್ನು ಗಂಭೀರವಾಗಿ ಚಿತ್ರಿಸಿದ್ದಾರೆ. ಅಂಚುವಿನ ಅಮೃತ ಈ ಬಳಲಿಕೆಯಲ್ಲಿ ಆತ್ಮಹತ್ಯೆಯ ಪರಿಹಾರ ಕುರಿತು ಪ್ರಯತ್ನಿಸುತ್ತಾಳೆ. ಆದರೆ ನರಹರಿ ಇದಕ್ಕೆ ವಿರುದ್ಧವಾಗಿ ವೇದಾಂತವು ಬೋಧಿಸುವ 'ನಿರ್ಲಿಪ್ತತೆ'ಯನ್ನು ರೂಢಿಸಿಕೊಂಡು ಮರೆಯಲು ಯತ್ನಿಸುತ್ತಾನೆ. ಆದರೆ ಅವು ಸಾಧ್ಯವಾಗದೆ ನಿತ್ಯ ಬದುಕಿನಲ್ಲಿ ಅವರು ಹೊಸಮಾರ್ಗಕ್ಕೆ ಅನುವಾಗುವುದು ಅನಿವಾರ್ಯವಾಗುತ್ತದೆ.

'ಅಂಚು' ಸ್ತ್ರೀಪಾತ್ರ ಪ್ರಧಾನವಾದ ಕೃತಿ. 'ಪ್ಯಾರನಾಯಿಕ್ ಮೊನಿಕ್ ಡಿಪ್ರೆಷನ್'(PMD) ಖಾಯಿಲೆಗೆ ಒಳಗಾಗಿದ್ದ ಅಮೃತ ಸದಾ 'ಅನಾಥ ಪ್ರಜ್ಞೆ'ಯಿಂದ ನರಳುತ್ತಿರುತ್ತಾಳೆ. ಸಂಶಯ, ಹಿಂಸೆ, ದ್ವೇಷ, ಅನುಕಂಪ ಎಲ್ಲ ರೀತಿಯಲ್ಲೂ ಈಕೆಯನ್ನೂ ಘಾಸಿಗೊಳಿಸಿವೆ. ಈ ಕೃತಿಯ ಸ್ವರೂಪವನ್ನು ಸಿ. ಎನ್. ರಾಮಚಂದ್ರನ್ 'ವ್ಯಕ್ತಿ ಸಂಬಂಧ'ದ ನೆಲೆಯಿಂದ ವಿಮರ್ಶಿಸಿದ್ದಾರೆ. "ಸಾವಿನ ಅಂಚಿನಿಂದ ಬದುಕನ್ನು ವಿಶ್ಲೇಷಿಸುವ ಭೈರಪ್ಪನವರ ಈ ಕಾದಂಬರಿ ಬದುಕಿನ ಬಗ್ಗೆ ಅನೇಕ ಮೌಲಿಕ ಒಳನೋಟಗಳನ್ನು ಕೊಡುತ್ತದೆ. ನಮ್ಮ ಬದುಕು ಅರ್ಥಪೂರ್ಣವಾಗುವುದು ನಮ್ಮ ಸಾಧನ ಸಂಪತ್ತುಗಳಿಂದಲ್ಲ. 'ನಾವು ಯಾರೊಬ್ಬರಿಗೆ ಮುಖ್ಯ. ನಾನಿಲ್ಲದೆ ಅವರ ಬದುಕು ಅಪೂರ್ಣ' ಎಂಬ ಅರಿವು ಮತ್ತು ಅಂತಹ ಪರಿಸ್ಥಿತಿಯುಂಟಾದಾಗ ಎಂದರೆ, ವ್ಯಕ್ತಿ ತನ್ನ ಕವಚದಿಂದ ಹೊರಗೆ ಬಂದು ಇನ್ನೊಬ್ಬರೊಡನೆ ಒಂದು ಅರ್ಥಪೂರ್ಣ ಸಂಬಂಧವನ್ನು ಸ್ಥಾಪಿಸಿದಾಗ. ಕಾದಂಬರಿಯುದ್ದಕ್ಕೂ ಒಂಟಿತನದಿಂದ, ಶೂನ್ಯಭಾವದಿಂದ ನರಳುವ ಅಮೃತಾ ಕೊನೆಯಲ್ಲಿ ಸಾವನ್ನು ತಿರಸ್ಕರಿಸಿ ಬದುಕನ್ನು ಅಪ್ಪಿಕೊಳ್ಳುವುದು ಇಂತಹ ಸಂಬಂಧವನ್ನು ಸ್ಥಾಪಿಸುವುದರ ಮೂಲಕವೇ......" (ಭೈರಪ್ಪಾಭಿನಂದನಾ – ೧೧೧). ಈ ಸಂಬಂಧದ ಸ್ವರೂಪ ಗಾಢವಾದಷ್ಟೂ ಅಮೃತಾ ಸೋಮಶೇಖರನೊಂದಿಗೆ ರೇಗುತ್ತಾಳೆ, ಜಗಳವಾಡುತ್ತಾಳೆ. ಆದರೆ ಆಕೆಯಿಂದಾಗಿ ಆತ ತಾನು ಮಾಡುತ್ತಿದ್ದ ಕೆಲಸದಲ್ಲಿ ಆಸಕ್ತಿಯನ್ನು ಕಳೆದುಕೊಂಡು ವಿಮುಖನಾದಾಗ ಅವಳಲ್ಲಿ 'ನೈತಿಕ ಪ್ರಜ್ಞೆ' ಜಾಗೃತವಾಗುತ್ತದೆ. ನರಹಳ್ಳಿ ಬಾಲಸುಬ್ರಹ್ಮಣ್ಯಂ ಈ ಅಂಶದ ಮೂಲಕ ವಿಶ್ಲೇಷಿಸುತ್ತಾರೆ: "... ಭೈರಪ್ಪನವರು 'ಅಂಚು' ಕಾದಂಬರಿಯಲ್ಲಿ ಗಂಡು–ಹೆಣ್ಣಿನ ಸಂಬಂಧವನ್ನು ಮನೋವೈಜ್ಞಾನಿಕ ನೆಲೆಯಲ್ಲಿ ವಿಶ್ಲೇಷಿಸಲು ಪ್ರಯತ್ನಿಸಿದ್ದಾರೆ. ಆದರೆ ಕಾದಂಬರಿ ಬೆಳೆದಂತೆ ಇದು ನೈತಿಕ ನೆಲೆಯ ಆಯಾಮ ಪಡೆದುಕೊಳ್ಳುತ್ತದೆ.....".

ಸ್ತ್ರೀ–ಪುರುಷ ಸಂಬಂಧ ಶುದ್ಧ ಪ್ರೀತಿಯ ನೆಲೆಯಲ್ಲಿ ಮಾತ್ರ ಪರಸ್ಪರ ಗಾಢವಾಗಿ ಸ್ಪಂದಿಸಲು ಸಾಧ್ಯ. ಕಾದಂಬರಿಯುದ್ದಕ್ಕೂ ಅಮೃತಾಳ ತೊಳಲಾಟ ಇಂಥ 'ನೆಪವಿಲ್ಲದ ಪ್ರೀತಿ'ಯನ್ನು ಕಾಣುವುದೇ ಆಗಿದೆ. ಇದರಿಂದಾಗಿ ಅಮೃತಾಳ ಚಿತ್ರಣ ಒಂದು ಕೇಸ್ ಹಿಸ್ಟರಿಯಾಗದೆ ಅರ್ಥಪೂರ್ಣ ಪಾತ್ರವಾಗಿ ಸೃಷ್ಟಿಯಾಗಿದೆ" (ಭೈರಪ್ಪಾಭಿನಂದನಾ : ೯೮, ೯೯). ಹೀಗೆ ಸದಾ ಸಾವಿನ ಬಗ್ಗೆಯೇ ಯೋಚಿಸುತ್ತಿದ್ದ ಅಮೃತಾಳಿಗೆ ಸೋಮಶೇಖರನ ನೆಪವಿಲ್ಲದ ಪ್ರೀತಿ ಜೀವನದತ್ತ ಸೆಳೆಯುತ್ತದೆ. ಜೊತೆಗೆ ತನ್ನ ತಂದೆಯ ರಹಸ್ಯ ಲೈಂಗಿಕ ಸಂಬಂಧದಿಂದ ಚಿಕ್ಕಮ್ಮನಿಗೆ ಕಿಟ್ಟಣ್ಣ

ಹುಟ್ಟಿದ್ದು ತಿಳಿದ ಮೇಲಂತೂ ಅವಳ ದಾರಿ ಭಿನ್ನವಾಗುತ್ತದೆ. "ತಾನಿಲ್ಲದೆ ಸೋಮಶೇಖರ ಬದುಕಲಾರ'' ಎಂಬುದು ಮನುಷ್ಯ ಬದುಕಿನ ಪರಸ್ಪರ ಸಂಬಂಧದ ಗಂಭೀರ ಧ್ವನಿಯಾಗಿದೆ. ಈ ದೃಷ್ಟಿಕೋನ ಸ್ವಾತಂತ್ರ್ಯಾನಂತರದ ಸ್ತ್ರೀಯರ ಮಾನಸಿಕ ಸ್ಥಿತ್ಯಂತರಗಳನ್ನು ಧ್ವನಿಸುತ್ತದೆ. ಹಾಗಾಗಿ 'ಅಂಚು' ಒಂದು ಮುಖ್ಯ ಕೃತಿಯಾಗಿದೆ.

ಇಂಥದೇ ಪರಿಸ್ಥಿತಿಯ ಮತ್ತೊಂದು ಕೃತಿ 'ನಿರಾಕರಣ'. ಹೆಂಡತಿಯರು ಅತ್ತೆ, ಭಾವಾದಿಗಳ ಸಾವಿನ ಈ ಘಾತ ಮತ್ತು ಮಕ್ಕಳನ್ನು ಸರಿಯಾಗಿ ಸಾಕಲಾರೆನೆಂಬ ಕೊರಗು ನರಹರಿಯಲ್ಲಿ 'ನಿರಾಕರಣ' ಮನೋಭಾವವನ್ನು ಹೆಚ್ಚಿಸುತ್ತವೆ. ಅರಳು ಮಲ್ಲಿಗೆ ಪಾರ್ಥಸಾರಥಿಯವರು ಅದಕ್ಕೆ ಕಾರಣವಾದ ಅಂಶಗಳನ್ನು ಗುರುತಿಸುತ್ತಾರೆ : "ಮೇಲು ಮೇಲಕ್ಕೆ ಹೋಗುವ ಬಯಕೆಯನ್ನಿರಿಸಿಕೊಂಡು ನರಹರಿ, ಜೊತೆಗೆ ಮಣ್ಣಿನ ವಾಸನೆಯನ್ನೂ ಇರಿಸಿಕೊಂಡು, ಪ್ರಯತ್ನ ಪೂರ್ವಕವಾಗಿ ಪರ್ವತವೇರಿ ಅಸ್ಥಿರತೆಯ ತೂಗುಯ್ಯಾಲೆಯಲ್ಲಿ ಕುಳಿತು ತ್ರಿಶಂಕುವಾಗಿದ್ದಾನೆ. ತನ್ನ ಬಾಳಿನಲ್ಲಿ ಸಾಧನೆಯ ಮಾರ್ಗವನ್ನು ಹಿಡಿದು ದೈವತ್ವವನ್ನು ಸಂದರ್ಶಿಸಿ ಪುನೀತವಾಗಬೇಕೆನ್ನುವ ಆತ ಒಂದು ಹೆಜ್ಜೆಯನ್ನೂ ಮುಂದಿಡಲಾಗದೆ ವಿಫಲನಾಗುತ್ತಾನೆ. ಕಾದಂಬರಿಯ ಆದಿಯಲ್ಲಿ ಹೇಗಿದ್ದನೋ ಮುಕ್ತಾಯದ ಘಟ್ಟದಲ್ಲೂ ಹಾಗೆಯೇ ಇರುತ್ತಾನೆ ಎಂದ ಮಾತ್ರಕ್ಕೆ ಅವನ ವ್ಯಕ್ತಿತ್ವದಲ್ಲಿ ಬೆಳವಣಿಗೆ ಇಲ್ಲವೆಂದಲ್ಲ. ಮಕ್ಕಳನ್ನು ಹಂಚಿದಾಗ, ಹಿಮಾಲಯವನ್ನು ಹತ್ತಿದಾಗ, ಬಾರಾಮಸಿ ಮಹಾರಾಜರನ್ನೂ ಕಂಡಾಗ, ಬಿಸಿ ನೀರಿನಲ್ಲಿ ಮಿಂದಾಗ, ಮುಂಬಯಿಯ ಕನ್ನೇರಿಯನ್ನು ಏರಿ ಚಿಂತನೆಯನ್ನು ಮಾಡುತ್ತಿದ್ದಾಗ ಮತ್ತು ಕಾಶಿಯಲ್ಲಿ ಭಿಕ್ಷೆ ಬೇಡುತ್ತಿದ್ದಾಗಿನ ಸಂದರ್ಭಗಳು.... ನರಹರಿಯ ... ಮಾನಸಿಕ ದ್ವಂದ್ವಗಳ.... ಹಿನ್ನೆಲೆಯಾಗಿ ಪರಿಣಮಿಸಿವೆ'' (ಸಹಸ್ಪಂದನ – ೪೦೯).

ಬದುಕಿನಲ್ಲಿದ್ದರೂ ಅದರೊಡನೊಂದಾಗದೆ ಉಳಿದ ಅಪೂರ್ಣ ಅನುಭವದ ಫಲವೇ ಈ ಮಾನಸಿಕ ದ್ವಂದ್ವತೆ. ನರಹರಿ ಎಷ್ಟು ಮೌನಿಯೆಂದರೆ ತನ್ನ ಮಾನಸಿಕ ನೋವನ್ನು ಮತ್ತೊಬ್ಬರೊಂದಿಗೆ ಎಂದಿಗೂ ಹೇಳಿಕೊಳ್ಳುವುದಿಲ್ಲ. ಆದರೆ ಅಮೃತ ಅದನ್ನು ಹೇಳಿಕೊಂಡು ನೇರವಾಗಿ ವಿರೋಧಿಸುತ್ತಾಳೆ. ಪ್ರಕೃತಿಯ ಸಮೃದ್ಧತೆಯೂ ಅವನ ಬರಡಾದ ಬದುಕನ್ನು ಚಿಗುರಿಸುವುದಿಲ್ಲ. ಲೌಕಿಕ ಮತ್ತು ಆಧ್ಯಾತ್ಮಿಕ ಎರಡೂ ಮಾರ್ಗಗಳಿಗೆ ಒಗ್ಗದೆ ಕೊನೆಗೂ ಭವಾನಿಯ ಮಾತಿನಂತೆ ಅವರೊಂದಿಗೆ ಉಳಿಯುತ್ತಾನೆ. ಯಾವ ತಾತ್ತ್ವಿಕ ಚಿಂತನೆಯನ್ನು ಹೇರದ 'ಅಂಚು' ಉತ್ತಮ ಕಲಾತ್ಮಕ ಕೃತಿಯಾದರೆ, 'ನಿರಾಕರಣ' ವಿಪುಲ ವಿವರಗಳಿಂದ ಕೂಡಿ ವ್ಯಕ್ತಿ ಸಂಕೀರ್ಣತೆಯನ್ನು ಅನಾವರಣಗೊಳಿಸುತ್ತದೆ.

'ಜಲಪಾತ' ಜೀವನದ ನೈಸರ್ಗಿಕ ಮತ್ತು ಅನೈಸರ್ಗಿಕ ಪ್ರವೃತ್ತಿಗಳ ನಡುವಿನ ಘರ್ಷಣೆಯನ್ನು ಒಳಗೊಂಡ ಕೃತಿ. ನಗರ ಮತ್ತು ಗ್ರಾಮೀಣ ಬದುಕಿನ ಸ್ವರೂಪ ಇಲ್ಲಿದೆ. ಕಲೆ ಮತ್ತು ಸಂಗೀತವನ್ನುಳ್ಳ ಸುಸಂಸ್ಕೃತ ಬದುಕಿನ ಸಾರ್ಥಕ್ಯ ಸ್ಥಾನ ಎಲ್ಲಿ ಎಂಬುದರೆಡೆ ದೃಷ್ಟಿಸುತ್ತಾರೆ. ಶಿವರಾಮು ಕಾಡನಕುಪ್ಪೆಯವರು ಜಲಪಾತದ ಬಗ್ಗೆ ವಿಮರ್ಶಿಸುತ್ತಾರೆ : "ಶ್ರೀಪತಿಯ ಹಳ್ಳಿಯ ಕಲ್ಪನೆ ಆದರ್ಶದ್ದೇ ಹೊರತು ಅರಿತದ್ದಲ್ಲ. ತಾಯಿ ಸತ್ತ ಮೇಲೆ ಮಾವನ ಮನೆಗೆ ಬಂದ ಭೂಪತಿ ಹಳ್ಳಿಯ ಬಗ್ಗೆ ಆದರ್ಶವನ್ನು ಕಟ್ಟಿಕೊಂಡಿದ್ದ. ಆದರೆ ಅವನ ಆದರ್ಶ ಹಳ್ಳಿಗಿಂತ ಬೇರೆಯಾಗಿತ್ತು.

ವಾಸ್ತವ ಹಳ್ಳಿ ಮತ್ತು ಬದಲಾಗುತ್ತಿರುವ ಮೌಲ್ಯಗಳನ್ನು ತಿಳಿಯದೆ, ತನ್ನ ತಂದೆಯ ಕಾಲದ ಹಳ್ಳಿಯೇ ಇಂದೂ ಇದೆ ಎಂದು ಬಂದದ್ದು ಶ್ರೀಪತಿಯ ದುರಂತ. ತನ್ನ ಮೂಲ ತಿಳಿವಳಿಕೆಗೂ ವಾಸ್ತವಕ್ಕೂ ಅಂತರವಿರುವಾಗ ಅವನು ಆ ಬದುಕಿಗೆ ಸ್ಪಂದಿಸಲಾರದವನಾಗುತ್ತಾನೆ. ಜೊತೆಗೆ ಹಳ್ಳಿಯ ಕಡು ಬಡತನವು ಅವನ ಮಗಳನ್ನು ಬಲಿ ತೆಗೆದುಕೊಂಡಾಗ ಆತನ ಹಳ್ಳಿಯ ಕಲ್ಪನೆ ಸಂಪೂರ್ಣ ನಶಿಸುತ್ತದೆ. ಈ ಬದುಕಿಗಿಂತ ಮುಂಬಯಿ ಎಷ್ಟೋ ಉತ್ತಮವೆಂದು ತಿಳಿದು ಮುಂಬಯಿಗೆ ಹಿಂತಿರುಗುತ್ತಾನೆ...

ಸೃಷ್ಟಿ ಶಕ್ತಿಯಿಂದ ವಿಜೃಂಭಿಸುವ ಜೀವನಶಕ್ತಿ ಮತ್ತು ಆ ಶಕ್ತಿಯನ್ನು ಹತ್ತಿಕ್ಕುವ ಜೀವನ ಪರಿಸ್ಥಿತಿಯ ತಾಕಲಾಟವೇ ಈ ಕಾದಂಬರಿಯ ಕಥಾವಸ್ತು ಎಂದು ಕಾದಂಬರಿಯ ಬೆಳವಣಿಗೆಯ ವಿವಿಧ ಹಂತಗಳಲ್ಲಿ ಗೋಚರಿಸುತ್ತಾ ಬಂದು, ಕೊನೆಗೆ ಅದು ಆದರ್ಶ ಮತ್ತು ವಾಸ್ತವಗಳ ತಿಕ್ಕಾಟದ ಮಟ್ಟಕ್ಕೆ ಮುಟ್ಟುತ್ತದೆ. ಶ್ರೀಪತಿಯ ಎಲ್ಲಾ ಅನಿಸಿಕೆಗಳು ಕೇವಲ ಆದರ್ಶದ ಮಟ್ಟದಲ್ಲೇ ನಿಂತುಬಿಡುತ್ತದೆ. ಆದರೆ ವಾಸ್ತವ ಪ್ರಪಂಚವೇ ಬೇರೆಯಾಗಿದ್ದು ಅದನ್ನು ಅರಿಯಲಾರದ, ಅರಿತೂ ಒಂದಾಗಲಾರದ ಇವನು ಅದರೊಡನೆ ಸೆಣಸುತ್ತಾನೆ. ಈ ಸೆಣಸಾಟದಲ್ಲಿ ಆದರ್ಶದ ಸೋಲಾಗಿ, ವಾಸ್ತವತೆಗೆ ಗೆಲುವು ಸಿಗುವುದು ಇಲ್ಲಿ ಗಮನಾರ್ಹವಾಗಿದೆ'' (ಸಹಸ್ಪಂದನ–೪೫೪) . ಶ್ರೀಪತಿಯ ಈ ತೊಳಲಾಟ ಕಾನೂರು ಹೆಗ್ಗಡಿತಿಯ ಹೂವಯ್ಯನನ್ನು ನೆನಪಿಸುತ್ತದೆ. ಆದರೆ ಹೂವಯ್ಯನದು ಸಮಗ್ರ ಹಿತಾಕಾಂಕ್ಷಿಯ ಸಾಮಾಜಿಕ ತೊಳಲಾಟ. ಶ್ರೀಪತಿಯದು ಕೇವಲ ವೈಯಕ್ತಿಕ. ಅವರು ಕೊನೆಗೆ ಕಟ್ಟಿಕೊಳ್ಳುವ ಬದುಕು ಕೂಡ ಅಂಥದೇ.

ಇಂಥದೇ ಆದರ್ಶ ವಾಸ್ತವಗಳ ಸಂಘರ್ಷದ ಮತ್ತೊಂದು ಕೃತಿ 'ಮತದಾನ'. ಸ್ವಾತಂತ್ರ್ಯಾನಂತರದಲ್ಲಿ ರಾಜಕೀಯ ವಿಚಾರಗಳು ವ್ಯಕ್ತಿ ಬದುಕನ್ನು ಹತ್ತಿಕ್ಕಿದ ಸ್ಪಷ್ಟ ನಿರೂಪಣೆ ಇಲ್ಲಿದೆ. ಡಾ. ಶಿವಪ್ಪ ಆದರ್ಶ ಮನೋಭಾವದ ವೈದ್ಯ. ತನ್ನ ಗ್ರಾಮದಲ್ಲಿ ಜನತಾ ಶುಶ್ರೂಶಾಲಯ ಸ್ಥಾಪಿಸಿ ಬಡಜನರ ಸೇವೆ ಮಾಡುತ್ತಾನೆ. (ಗಾಂಧೀಜಿಯವರ ಆದರ್ಶಗಳಿವು). ಆತನ ಜನಪ್ರಿಯತೆಯನ್ನು ತಮ್ಮ ರಾಜಕೀಯ ಬಂಡವಾಳವನ್ನಾಗಿಸಿಕೊಂಡು ಒಂದು ವರ್ಗ ಅವನ ನೈತಿಕತೆಗೆ ಆಘಾತವನ್ನುಂಟು ಮಾಡುತ್ತದೆ. ಚೆನ್ನಣ್ಣ ವಾಲೀಕಾರರು ಹೇಳುವಂತೆ "......ಸಾದರವಳ್ಳಿಯ ಪ್ರಕಾಶಕುಮಾರನನ್ನು ಆರಿಸಿ ತರಬೇಕೆನ್ನುವ ಕೆಲವು ವಕೀಲರು ಸೇರಿ, ಸಾದರವಳ್ಳಿ ಮಂತ್ರಿಗಳಿಗೆ ಹೋಗುವ ಓಟುಗಳನ್ನು ಹರಿದು ಹಂಚಿ ಹಾಕಬೇಕೆಂದು, ಜನತಾ ನಾಯಕರು ಮುಂದೆ ಬರಬೇಕು ಎನ್ನುವ ಘೋಷಣೆಯೊಂದಿಗೆ ಒಂದು ಸಲವಲ್ಲ ಹಲವು ಸಲ ಡಾ. ಶಿವಪ್ಪನನ್ನು ಕಂಡು ಅವನ ಮಾತಿನ ನೇರಕ್ಕೆ ನಡೆದು, ಹೆಚ್ಚು ಹೆಚ್ಚಾಗಿ ಜನತಾ ಸೇವೆ ಮಾಡಲು ಚುನಾವಣೆಗೆ ಇಳಿಯುವುದು ಅವಶ್ಯಕ ಎಂಬ ಹುಚ್ಚನ್ನು ಅವನ ತಲೆಯಲ್ಲಿ ಬಿತ್ತುವ ಪ್ರಸಂಗ ಈ ಕಾದಂಬರಿಯ ಕೇಂದ್ರಬಿಂದುವಾಗಿದೆ. ಈ ಘಟನೆ ಶಿವಪ್ಪನ ಪವಿತ್ರ ಸೇವೆಗೆ ಸ್ವಲ್ಪ ಕುಂದು ತಂದಿತಾದರೂ, ಮುಂದೆ ಕುತಂತ್ರಕ್ಕೆ ಒಳಗಾಗಿ ಸೋಲಾದಾಗ ಬಹಳಷ್ಟು ಬುದ್ಧಿ ಬಂದು, ಚುನಾವಣೆ ಕಾಲದಲ್ಲಿ ಸರಿಯಾದ ಸಮಯಕ್ಕೆ ತಾನು ನೋಡಲು ಹೋಗದ ಕಾರಣ ಒಬ್ಬ ಬಡವನ ಹೆಂಡತಿ ಸತ್ತುದಕ್ಕೆ ಪದೇ ಪದೇ ಮಾಡಿಕೊಳ್ಳುವ ಪಶ್ಚಾತ್ತಾಪ ಮತ್ತೆ ಮೊದಲಿನ ತನ್ನ ಕಾರ್ಯದಲ್ಲಿ ಗಟ್ಟಿಯಾಗಿ ನಿಲ್ಲುವಂಥ ತಿರುವು ತರುವುದು. ದುಡ್ಡು ಕೊಟ್ಟು

ಓಟು ಪಡೆಯಬಾರದೆಂಬ ದೃಢ ಆದರ್ಶವಿದ್ದರೂ ಒಮ್ಮೊಮ್ಮೆ ಪರಿಸ್ಥಿತಿ ಪ್ರಸಂಗಗಳ ಒತ್ತಡಕ್ಕೆ ರಾಜಕಾರಣದಲ್ಲಿ ಮಣಿಯ ಬೇಕಾಗುವುದು ಎನ್ನುವುದಕ್ಕೆ ಆದರ್ಶದ ಮೂರ್ತಿಯಾಗಿದ್ದ ಡಾ. ಶಿವಪ್ಪನೇ ಉದಾಹರಣೆಯಾಗಿದ್ದಾನೆ'' (ಸಹಸ್ಪಂದನ – ೩೦೭).

ಬ್ರಿಟಿಷರಿಂದ ಸ್ವಾತಂತ್ರ್ಯ ಪಡೆದು 'ಪ್ರಜಾಪ್ರಭುತ್ವ'ದ ನೆಲೆಯಿಂದ ರೂಪುಗೊಂಡ ಭಾರತದ ರಾಜ್ಯಾಂಗ ವ್ಯವಸ್ಥೆ 'ಮತದಾನ'ಕ್ಕೆ ಮಹತ್ವಕೊಟ್ಟಿತು. ಆದರೆ ಈ ವ್ಯವಸ್ಥೆ ಸಂಪೂರ್ಣ ಭ್ರಷ್ಟಗೊಂಡು ಹಣಮಯವಾಗಿ ಪರಿವರ್ತನೆಗೊಂಡಿತು. ಕ್ರಮೇಣ ಜಾತಿ, ಧರ್ಮಗಳೂ ಆ ಕಕ್ಷೆಯಲ್ಲಿ ಸೇರಿಕೊಂಡು ಅತ್ಯಂತ ಸಂಕೀರ್ಣಗೊಂಡಿದೆ. ರಾಜ್ಯದ ಹಿತಕ್ಕೆ ಬದಲಾಗಿ ಜಾತಿ ರಾಜಕಾರಣದ ಮೊಂಡು ತಿಕ್ಕಾಟವನ್ನು ಕಂಡ ಶಿವಪ್ಪನಿಗೆ ದಂಗಾಗುತ್ತದೆ. ಆದರೆ ಈ ರಾಜಕೀಯ ಸೋಲಿನಿಂದ ವಿಚಲಿತನಾಗದ ಶಿವಪ್ಪ ತನ್ನ ಸೇವಾಕಾರ್ಯದಲ್ಲಿ ನಿರತನಾಗುತ್ತಾನೆ. ತನ್ನ ಈ ಬದುಕಿಗೆ ಸಹಾಯವಾಗಬಹುದಾದ ವಿಚ್ಛೇದಿತೆ ರಂಗಲಕ್ಷ್ಮಿಯನ್ನು ಮದುವೆಯಾಗುವುದರ ಮೂಲಕ ಅತ್ಯಂತ ಪ್ರಗತಿಶೀಲನಾಗುತ್ತಾನೆ. ಕಾಡನಕುಪ್ಪೆಯವರ, ಈ ಅಂಶದಿಂದಾಗಿ ಈ ಕೃತಿ ವಿಶಿಷ್ಟವಾಗಿದೆ ಎನ್ನುತ್ತಾರೆ.

ರಾಜಕೀಯ ವಿಚಾರದ ಮತದಾನ ೧೯೭೭ರದ್ದು. ಆದರೆ ಅನಂತರ ರಾಜಕೀಯ ಪರಿಸ್ಥಿತಿ ಇನ್ನೂ ಸಂಕೀರ್ಣಗೊಂಡಿತು. ಅಂಥ 'ಸಾಮಾಜಿಕ ಭ್ರಷ್ಟತೆ'ಯ ಮೂರ್ತ ಚಿತ್ರಣವೇ 'ತಂತು'. ಎಪ್ಪತ್ತರ ದಶಕದ ರಾಜಕೀಯ ವಿಚಾರಗಳನ್ನು ಒಳಗೊಂಡ ಈ ಕೃತಿ ವ್ಯಕ್ತಿ ಬದುಕಿನಲ್ಲಿ ಉಂಟಾದ ಪರಿಣಾಮವನ್ನು ಗಂಭೀರವಾಗಿ ದಾಖಲಿಸುತ್ತದೆ. 'ಸೇವೆ ಮತ್ತು ಪ್ರಾಮಾಣಿಕತೆ'ಗಳು ಇಲ್ಲಿಯೂ ಪ್ರಧಾನ ಅಂಶಗಳಾಗಿವೆ. ರಾಜಕೀಯ ಭ್ರಷ್ಟತೆ ಇದನ್ನು ನಂಬಿರುವ ವ್ಯಕ್ತಿಗಳನ್ನು ಹೇಗೆ ಹತ್ತಿಕ್ಕಿ ಲಾಭ ಮಾಡಿಕೊಳ್ಳುತ್ತದೆ ಎಂಬುದನ್ನು ಈ ಕೃತಿ ಅನಾವರಣಗೊಳಿಸುತ್ತದೆ. ಈ ಕೃತಿಯ ಸ್ವರೂಪದ ಬಗ್ಗೆ ಓ. ಎಲ್. ನಾಗಭೂಷಣ ಸ್ವಾಮಿಯವರ ಹೇಳುವ ಮಾತುಗಳು ಮುಖ್ಯವಾದುವು : ''ಶ್ರೀ ಎಸ್. ಎಲ್. ಭೈರಪ್ಪನವರ ಇದುವರೆಗಿನ ಎಲ್ಲ ಮುಖ್ಯ ಕಾದಂಬರಿಗಳ ಆಶಯಗಳನ್ನು ಒಳಗೊಂಡು ಒಂಬೈನೂರು ಪುಟಗಳಷ್ಟು ವಿಸ್ತಾರವಾಗಿ ಬೆಳೆದಿರುವ ಮಹಾತ್ವಾಕಾಂಕ್ಷೆಯ ಕೃತಿ ಇದು. ಭೈರಪ್ಪನವರ ಯಾವ ಕಾದಂಬರಿಯೂ ಕೇವಲ ಕಥೆಯಷ್ಟೆ ಆಗಿರದೆ ವಾಗ್ವಾದ ಭೂಮಿಕೆಯೂ ಆಗಿರುತ್ತದೆ. 'ತಂತು'ವೂ ಈ ಮಾತಿಗೆ ಹೊರತಲ್ಲ'' (ಪುಸ್ತಕ ಮಾಹಿತಿ :೬).

ಪತ್ರಕರ್ತ ರವೀಂದ್ರ ಟ್ರಿಬ್ಯೂನಲ್ ಪತ್ರಿಕೆಯ ಮೂಲಕ ಸರ್ಕಾರದ ಭ್ರಷ್ಟಾಚಾರವನ್ನೆಲ್ಲ ಬಯಲಿಗೆಳೆಯುತ್ತಿದ್ದ ಕಾರಣ ತೊಂದರೆಗೊಳಗಾಗಿ ರಂಕಾಗಾಂಧಿಯವರ ಮಕ್ಕಳು ಅದನ್ನು ವಹಿಸಿಕೊಳ್ಳುತ್ತಾರೆ. ಅದು ಕ್ರಮೇಣ ಸರ್ಕಾರದ ಮುಖವಾಣಿಯಾದ ಕಾರಣ ಆತ ಸಂಪಾದಕ ಸ್ಥಾನಕ್ಕೆ ರಾಜೀನಾಮೆ ಕೊಟ್ಟು ಹೊರಬಂದು 'ದಿ ಫ್ಯಾಕ್ಟ್' ಪತ್ರಿಕೆಗೆ ಸೇರುತ್ತಾನೆ. ಸಂಗೀತ ಸಾಧನೆಯಲ್ಲಿ ತೊಡಗಿದ್ದ ಹೊನ್ನತ್ತಿ ಕಾಂತಿಯ ಕಾರಣ ಅಪಮಾರ್ಗ ತುಳಿದು ಅರಿವಾದ ಮೇಲೆ ಅದನ್ನು ಬಿಟ್ಟು ಅಂಗವಿಕಲರ ಸೇವೆಗಾಗಿ ಒಂದು ಶಾಲೆ ತೆರೆಯುತ್ತಾನೆ. ಅಣ್ಣಯ್ಯಗೌಡರ ಬಳಗವೂ ಅಲ್ಲಿಗೆ ಬರುತ್ತದೆ.

ಈ ಕೃತಿಯು ಎಪ್ಪತ್ತರ ದಶಕದ ರಾಜಕೀಯ ಮತ್ತು ಸಾಮಾಜಿಕ ಭ್ರಷ್ಟತೆ ಸಾಮಾನ್ಯ ಜನಜೀವನವನ್ನು ವ್ಯತ್ಯಸ್ತಗೊಳಿಸಿದ ವಿಚಾರವನ್ನು ಈ ಕೃತಿ ಗಂಭೀರವಾಗಿ ದಾಖಲಿಸುತ್ತದೆ. ಓ. ಎಲ್. ನಾಗಭೂಷಣ ಸ್ವಾಮಿಯವರು ಈ ಕೃತಿಯು ಬಿಂಬಿಸುವ ಪರಿಣಾಮದ ಬಗ್ಗೆ ಹೇಳುತ್ತಾರೆ: "ಕಾದಂಬರಿಯನ್ನು ಓದಿದ ಮೇಲೆ ಒಂದು ರೀತಿಯ ವಿಷಣ್ಣತೆ ಮತ್ತು ವಿಫಲತೆಯ ಭಾವ ಸ್ವಲ್ಪ ಹೊತ್ತು ಮನಸ್ಸಿನಲ್ಲಿ ಉಳಿಯುತ್ತದೆ. ಏಕೆಂದರೆ ವಾಸ್ತವವಾದೀ ಮಹಾಕೃತಿಗಳು – ಅದು ಮಲೆಗಳಲ್ಲಿ ಮದುಮಗಳು ಇರಬಹುದು ಅಥವಾ ಅನ್ನಾಕರೆನಿನಾ ಇರಬಹುದು–ಮನಸ್ಸು ತುಂಬುವಂತಹ, ಪ್ರೀತಿ ಉಕ್ಕಿಸುವಂತಹ, ಬದುಕಿನ ಬಗ್ಗೆ ಉತ್ಸಾಹ ಹುಟ್ಟಿಸುವಂತಹ ಪಾತ್ರಗಳನ್ನೂ ಸನ್ನಿವೇಶಗಳನ್ನೂ, ಇದು ನಮ್ಮದೇ ಎಂಬಂಥ 'ದರ್ಶನ'ವನ್ನು ಕೊಡುತ್ತವಲ್ಲ ಹಾಗೆ ಇಲ್ಲಿ ಆಗುವುದಿಲ್ಲ. ಇಲ್ಲಿನ ಯಾವ ಪಾತ್ರವೂ ಪ್ರೀತಿಗೆ ಅರ್ಹ ಅನಿಸುವುದಿಲ್ಲ. ಯಾವ ಪಾತ್ರವೂ ಬದುಕಿನ ಹೋರಾಟದಲ್ಲಿ ಕಿಂಚಿತ್ತಾದರೂ ಅರ್ಥ ಅಥವಾ ಯಶಸ್ಸು ಪಡೆಯಿತು ಎನಿಸುವುದಿಲ್ಲ. ಬದುಕಿನ ಬಗೆಗೆ ಶ್ರದ್ಧೆಯಾದರೂ ಏಕಿರಬೇಕೆಂಬ ದಿಟ್ಟ ನಿರಾಶೆ, ಖಾಲಿತನ ಮಾತ್ರ ಉಳಿಯುತ್ತದೆ.

ಕಾದಂಬರಿಯಾಗಿ ಇಂಥ ಕೊರತೆಗಳು ಕಾಣುತ್ತವಾದರೂ 'ತಂತು' ಎತ್ತುವ ಮೂಲ ಪ್ರಶ್ನೆಗಳು ತುಂಬ ಮುಖ್ಯವಾದುವೆಂಬುದರಲ್ಲಿ ಸಂದೇಹವಿಲ್ಲ". (ಪುಸ್ತಕ ಮಾಹಿತಿ: ೭)

ಓ. ಎಲ್. ಎನ್. ಅವರ ಈ ಮಾತು 'ದಾಟು', 'ಗೃಹಭಂಗ', 'ಗ್ರಹಣ', 'ದೂರಸರಿದರು', 'ತಬ್ಬಲಿಯು ನೀನಾದೆ ಮಗನೆ'– ಈ ಕೃತಿಗಳಿಗೂ ಅನ್ವಯಿಸುತ್ತದೆ. ಈ ಮೂಲಕ ಬೈರಪ್ಪನವರು ತಾವು ತೀರಾ 'ಆಶಾವಾದಿ'ಗಳಲ್ಲವೆಂಬುದನ್ನು ಅಭಿವ್ಯಕ್ತಿಸಿದ್ದಾರೆನಿಸುತ್ತದೆ.

ಬೈರಪ್ಪನವರ ಕೃತಿಗಳಲ್ಲೆಲ್ಲ 'ಪರ್ವ' ತುಂಬ ವಿಭಿನ್ನವಾದುದು. ಒಂದು ಯುಗದ ಮೌಲ್ಯಗಳನ್ನು ಅತ್ಯಂತ ವಾಸ್ತವವಾಗಿ ಹೇಳುವ ಕೃತಿ. ವ್ಯಾಸಭಾರತದ ಹತ್ತು–ಹನ್ನೊಂದು ಪರ್ವಗಳ ಕಥೆಯನ್ನು ಆದರ ಕಥಾನಕದೊಂದಿಗೆ ನಿರೂಪಿಸಲಾಗಿದೆ. ಈ ಕೃತಿರಚನೆಗೆ ಕಾರಣವಾದ ಅಂಶಗಳನ್ನು ಬೈರಪ್ಪನವರೇ ತಮ್ಮ 'ನಾನೇಕೆ ಬರೆಯುತ್ತೇನೆ' ಕೃತಿಯಲ್ಲಿ ವಿವರಿಸಿದ್ದಾರೆ: "ಗಢವಾಲ್ ಭಾಗದ ಹಿಮಾಲಯದಲ್ಲಿ ಸಂಚರಿಸುತ್ತಿದ್ದಾಗ ಬಹುಪತೀ ಪದ್ಧತಿಯುಳ್ಳ ಒಂದು ಕಿರು ಹಳ್ಳಿಯಲ್ಲಿ ರಾತ್ರಿ ತಂಗುವ ಪ್ರಸಂಗ ಬಂತು. ಮನೆಗೆ ಸೊಸೆಯಾಗಿ ಬಂದವಳು ಅಣ್ಣ ತಮ್ಮಂದಿರಿಗೆಲ್ಲ ಸಮನಾಗಿ ಹೆಂಡತಿಯಾಗುತ್ತಾಳೆ. ಎಷ್ಟು ಜನ ಹೆಂಡರಿದ್ದರೂ ಎಲ್ಲರೂ ಎಲ್ಲರಿಗೂ ಸಮನಾಗಿ ಹೆಂಡಿರೆ. ಮದುವೆಯಾಗುವುದು ಹಿರಿಯನ ಹೆಸರಿಗೆ. ಬಳಕೆಯ ಹಕ್ಕು, ಆಚರಣೆಗಳಲ್ಲಿ ಸೋದರರಿಗೆಲ್ಲ ಸಮಾನಾಧಿಕಾರ. ಈ ಬಗೆಗೆ ಮಾನವ ಸಂಸ್ಕೃತಿಜ್ಞರ ಪುಸ್ತಕಗಳನ್ನು ಓದಿದ್ದೆ. ಆದರೆ ಖುದ್ದು ಕಂಡಾಗ ಕುತೂಹಲ, ಉದ್ವಿಗ್ನತೆ, ಸಂಭ್ರಮ. ಈ ಕುಟುಂಬ ವ್ಯವಸ್ಥೆಯ ಒಳಗನ್ನು, ಭಾವನೆಗಳ ವ್ಯತ್ಯಾಸವನ್ನು ವಿಚಾರಿಸುತ್ತಾ ಅಲ್ಲೇ ನಿಂತೆ. ಸುಮಾರು ಎರಡು ತಾಲ್ಲೂಕಿನಷ್ಟು ವಿಸ್ತಾರದಲ್ಲಿ ಹರಡಿರುವ ಹಳ್ಳಿಗಳಲ್ಲಿ ಈ ಪದ್ಧತಿ ಇದೆ. ಅವರೆಲ್ಲ ಬ್ರಾಹ್ಮಣರು ಅಥವಾ ಕ್ಷತ್ರಿಯರು– ಮೇಲುಜಾತಿಯವರೇ. ತಮ್ಮಲ್ಲಿ ದ್ರೌಪದಿಯ ಕಾಲದಿಂದ ಈ ಪರಂಪರೆ ಬಂತೆಂದು ಹೇಳುತ್ತಾರೆ" (ನಾನೇಕೆ ಬರೆಯುತ್ತೇನೆ – ೨೦). ಈ ಅಂಶವನ್ನು ಗಮನಿಸಿದ ಬೈರಪ್ಪನವರು ಮಹಾಭಾರತ ಕೇವಲ ಊಹೆಯ ಕತೆಯಲ್ಲ; ನೈಜ ಬದುಕು ಎಂಬುದನ್ನು

ಮನಗಂಡು ಅದರ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಧ್ಯಯನಕ್ಕೆ ತೊಡಗಿದರು . ( ಈ ವೇಳೆಗಾಗಲೇ ಮರಾಠಿಯಲ್ಲಿ ಇರಾವತಿಕರ್ವೆಯವರ 'ಯುಗಾಂತ' ಕೃತಿ ಮಹಾಭಾರತ ಕಾಲದ ಸಾಮಾಜಿಕ ಮೌಲ್ಯಗಳ ಬಗ್ಗೆ ವೈಚಾರಿಕ ಚಿಂತನೆಗಳನ್ನು ಬಿಂಬಿಸಿತ್ತು.) ಗೋರಖಪುರದ ಪರಿಷ್ಕೃತ ಪಠ್ಯದಿಂದ ಲೇಖಕರಿಗೆ ಲಭ್ಯವಾದ ಅನೇಕ ಮಾಹಿತಿಗಳು ಈ ಕೃತಿರಚನೆಗೆ ಹೊಸ ಗ್ರಾಸವನ್ನೊದಗಿಸಿವೆ. ಸಮಗ್ರ ಜನಜೀವನದ ವಿಚಾರವಾಗಿ ಗ್ರಹಿಸಿದ ಅವರು ಪರ್ವ ರಚನೆಯ ಬಗ್ಗೆ ಕೆಲವು ಮುಖ್ಯ ವಿಚಾರಗಳನ್ನು ಹೇಳುತ್ತಾರೆ : "ಭಾರತದ ಕಥೆಯ ವಿವರಗಳ ಐತಿಹಾಸಿಕ ಸತ್ಯಕ್ಕಿಂತ ಅವುಗಳ ಸಾಮಾಜಿಕ, ಆರ್ಥಿಕ, ರಾಜಕೀಯ ಸತ್ಯವು ಹೆಚ್ಚು ಮಹತ್ವದ್ದೆನ್ನಿಸಿ ಆ ದೃಷ್ಟಿಯಿಂದ ಮಾತ್ರ ಅಧ್ಯಯನ ಮಾಡ ತೊಡಗಿದೆ... ಇಂಥ ಶತಮಾನವೆಂಬ ಕಾಲಿಕ ಲೆಕ್ಕಕ್ಕಿಂತ ಹೆಚ್ಚಾಗಿ ಸಾಮಾಜಿಕ, ಆರ್ಥಿಕ, ರಾಜಕೀಯ ಜೀವನದ ಒಂದು ನಿರ್ದಿಷ್ಟ ಅವಧಿಯಲ್ಲಿ ಕಥೆ ಘಟಿಸಿದೆ. ವೈದಿಕ ಸಂಸ್ಕೃತಿಯ ಬೆಳವಣಿಗೆಯ ಒಂದು ಖಚಿತ ಘಟ್ಟವನ್ನು ಅದು ಸೂಚಿಸುತ್ತದೆ. ಯಜ್ಞಯಾಗಾದಿಗಳು ವಿವರ ವಿವರವಾಗಿ ಬೆಳೆದು ಮುಗಿದ ಕಾಲ ಅದು. ಚಿಂತನೆಯೇ ಪ್ರಧಾನವಾದ ಉಪನಿಷತ್ತುಗಳ ಆರಂಭ ಕಾಲವೂ ಇದೇ ಇರಬಹುದು. ವ್ಯಾಸ ಎಂಬುವವರೂ ವೇದವನ್ನು ವಿಂಗಡಿಸಿದ, ಬ್ರಹ್ಮಸೂತ್ರಗಳನ್ನು ರಚಿಸಿದ ಹಾಗೂ ಭಾರತವನ್ನು ಬರೆದ ವ್ಯಾಸ ಒಬ್ಬನೇ ಎಂದು ಪರಂಪರೆ ಹೇಳುತ್ತದೆ. ಒಟ್ಟಿನಲ್ಲಿ ಆ ಪರಂಪರೆಯು ಸೂಚಿಸುವ ಸಂಸ್ಕೃತಿಯ ಅಧ್ಯಯನವು ನನಗೆ ಮುಖ್ಯ ಸಂಗತಿಯಾಯಿತು'' (ನಾನೇಕೆ ಬರೆಯುತ್ತೇನೆ : ೨೩, ೨೪). ಈ ಬಗೆಯ ಸಮಗ್ರ ಒಳನೋಟಗಳಿಂದಾಗಿ 'ಪರ್ವ' ವಿಶಿಷ್ಟ ಕೃತಿಯಾಗಿದೆ. ಅದರಲ್ಲಿನ ಪಾತ್ರಗಳೆಲ್ಲ ಸಮಕಾಲೀನ ವ್ಯಕ್ತಿಗಳಂತೆಯೇ ಮೂಡಿ ಬಂದಿವೆ. 'ಬದುಕು ನಿರಂತರ, ಪದವಿ ನಿರಂತರ, ವ್ಯಕ್ತಿ ಅಲ್ಲ' ಎಂಬ ವಿಚಾರದಿಂದಾಗಿ ಕೃತಿ ಹೆಚ್ಚು ಸಮಕಾಲೀನವಾಗಿದೆ. ಮಹಾಭಾರತದಲ್ಲಿ ಬರುವ ವಿರಾಟನಗರ, ಮಥುರ, ಇಂದ್ರಪ್ರಸ್ಥ, ಏಕಚಕ್ರನಗರ, ಹಸ್ತಿನಾವತಿ, ರಾಜಗೀರ್ ಇವೇ ಎಂದು ಗುರುತಿಸಲ್ಪಟ್ಟಿರುವ ದೆಹಲಿ, ಮಥುರಾ ಮುಂತಾದ ಪ್ರದೇಶಗಳಿಗೆ ಲೇಖಕರು ಸ್ವತಃ ಭೇಟಿಕೊಟ್ಟಿದ್ದಾರೆ. ಅಲ್ಲಿನ ಜನ ಜೀವನ, ನಂಬಿಕೆ, ಆಚರಣೆ ಮೊದಲಾದ ಅಂಶಗಳನ್ನು ಅಭ್ಯಸಿಸಿ ಸಾಂಸ್ಕೃತಿಕ ಮಾನವಶಾಸ್ತ್ರದ ನೆಲೆಯಿಂದ ಕೃತಿ ರಚಿಸಿದ್ದಾರೆ. ಡಾ. ಕೆ. ವಿ. ನಾರಾಯಣ ಅವರು ಇದೊಂದು ಸ್ವತಂತ್ರ ಕೃತಿಯಾಗಿರುವುದರಿಂದ ಅದನ್ನು ಮತ್ತೊಂದರೊಂದಿಗೆ ಹೋಲಿಸುವುದು ಕಷ್ಟಸಾಧ್ಯವೆನ್ನುತ್ತಾರೆ: "ಮಹಾಭಾರತದ ಕಥೆಯೇ ಪರ್ವಕ್ಕೆ ಆಧಾರ. ಕೆಲವು ಸಂದರ್ಭದಲ್ಲಿ 'ಮೂಲ' ಮಹಾಭಾರತದೊಡನೆ ಪರ್ವವನ್ನು ಗುಣಾತ್ಮಕವಾಗಿ ಹೋಲಿಸುವ ಪ್ರಯತ್ನಗಳು ನಡೆದಿವೆ. 'ಮೂಲ' ಭಾರತವೆಂಬುದು ಸಂಸ್ಕೃತದ ರಚನೆ. ಆದರೆ ಭಾರತದ ಉದ್ದಕ್ಕೂ ಈ ಭಾರತದ ಹಲವಾರು ಪಾಠಗಳು ಪ್ರಸಿದ್ಧವಾಗಿವೆ. ಕಥಾ ವಿವರಗಳಲ್ಲೇ ಎಷ್ಟೋ ವ್ಯತ್ಯಾಸಗಳಿವೆ.... ಕನ್ನಡಕ್ಕೆ ಅದರದೇ ಆದ ಭಾರತದ ಪರಂಪರೆ ಇದೆ. ವೈದಿಕ ಸಂಪ್ರದಾಯದ ಭಾರತವೇ ಮುಖ್ಯವಾಗಿ ಪಂಪ, ಕುಮಾರವ್ಯಾಸರಿಂದ ಕನ್ನಡದಲ್ಲಿ ಮೈತಳೆದಿದೆ. ಇವರಿಬ್ಬರ ಕಾವ್ಯ ನಮಗೆ ಭಾರತದ ಬಗ್ಗೆ ಒದಗಿಸುವ ಒಳನೋಟಗಳು, ಸಂಸ್ಕೃತ ಭಾರತವು ನೀಡುವ ಒಳನೋಟಕ್ಕಿಂತ ಬಿನ್ನವೇ ಆಗಿವೆ. ಏಕೆಂದರೆ ಇವರು ಕನ್ನಡದ ಸಾಂಸ್ಕೃತಿಕ ಸಂದರ್ಭ ಹಾಗೂ ಕಾವ್ಯ ಪರಂಪರೆಯೊಳಗೆ ತಮ್ಮ ಕೃತಿಗಳನ್ನು ರಚಿಸಿದ್ದಾರೆ... ಭಾರತ ಪರಂಪರೆ ಸಂಪೂರ್ಣವಾಗಿ ಅದರ ಲಕ್ಷಣಗಳನ್ನು ಖಚಿತಗೊಳಿಸಲು ಸಾಧ್ಯವಿಲ್ಲ. ಇದಲ್ಲದೆ

ಮೌಖಿಕವಾಗಿ ಹರಿದು ಬಂದ ಕಥನ ಕ್ರಮ ಹಾಗೂ ಜನಪದ ಭಾರತದ ಸರಣಿಯೂ ಕೂಡಿದೆಯೆಂದ ಮೇಲೆ ಇದು ಮತ್ತಷ್ಟು ಅಸ್ಪಷ್ಟಗೊಳ್ಳುವುದನ್ನು ನಾವು ಗಮನಿಸಬಹುದಾಗಿದೆ. ಹೀಗಿರುವಾಗ ಪರ್ವ ಕಾದಂಬರಿಯನ್ನು....... ಗುಣಾತ್ಮಕವಾಗಿ ಹೋಲಿಸುವುದು ಆಗದ ಸಂಗತಿಯೆಂದೇ ತೋರುತ್ತದೆ'' (ಪರ್ವ ಒಂದು ಸಮೀಕ್ಷೆ : ೩೬, ೩೭).

ಆದರೆ ಬಹಳಷ್ಟು ವಿಮರ್ಶಕರು ಈ ಹೋಲಿಕೆಯೊಂದಿಗೆ ವಿಮರ್ಶಿಸಿದ್ದಾರೆ. ಕುರ್ತಕೋಟಿಯವರು ತಮ್ಮ 'ಪೌರಾಣಿಕತೆಯನ್ನು ಕಳಚಿಕೊಂಡ ಪರ್ವ' ಲೇಖನದಲ್ಲಿ ಮಹಾಭಾರತ ಮತ್ತು ಪರ್ವಗಳೆರಡನ್ನು ಹೋಲಿಸುತ್ತಾರೆ : "ನಮ್ಮ ಲಾಕ್ಷಣಿಕರ ಪ್ರಕಾರ ಮಹಾಭಾರತ ಇತಿಹಾಸವೇ ಹೊರತು ಕಾವ್ಯವಲ್ಲ. ವಾಲ್ಮೀಕಿಯೇ ಆದಿಕವಿ. ಆದರೂ ಇತಿಹಾಸ ಪುರಾಣ ಕಾವ್ಯಗಳು ಕೂಡಿ ಹೋಗುವುದನ್ನು ನಮ್ಮ ಶಾಸ್ತ್ರಗಳು ನಿಷೇಧಿಸಲಿಲ್ಲ. ಮಹಾಭಾರತದ ಮೂರು ಪ್ರಾರಂಭಗಳು ಕ್ರಮವಾಗಿ ಇತಿಹಾಸ, ಕಾವ್ಯ ಮತ್ತು ಪುರಾಣಗಳನ್ನು ಪ್ರತಿನಿಧಿಸುತ್ತವೆಂದು ನನ್ನ ನಮ್ರವಾದ ತಿಳಿವಳಿಕೆಯಾಗಿದೆ. ಮಹಾಭಾರತದಲ್ಲಿ ಇವು ಮೂರೂ ಪ್ರತ್ಯೇಕಿಸಬಾರದಂತೆ ಸೇರಿಕೊಂಡಿವೆ. ಇತಿಹಾಸದ ವಾಸ್ತವತೆ ಮತ್ತು ಪುರಾಣಗಳ ಸಾರ್ವಕಾಲಿಕತೆಯಿಂದ ಕಾವ್ಯಸತ್ಯ ಹೆಚ್ಚು ಶ್ರೀಮಂತವಾಗುತ್ತದೆ. ಅಂತಲೇ ಸಾಹಿತ್ಯ ಮತ್ತೆ ಮತ್ತೆ ಮಹಾಭಾರತದಿಂದ ವಸ್ತು ಸನ್ನಿವೇಶಗಳನ್ನು ಪಡೆಯಿತು. ಪಂಪನಿಂದ 'ಪರ್ವ'ದವರೆಗೆ ಕನ್ನಡದಲ್ಲಂತೂ ಈ ಕ್ರಮ ಅವ್ಯಾಹತವಾಗಿ ನಡೆದು ಬಂದಿದೆ'' (ಪರ್ವ – ಒಂದು ಸಮೀಕ್ಷೆ : ೬). ಪರ್ವವು ಮಹಾಭಾರತದ ವಸ್ತುವಾಧಾರಿತ ಕೃತಿ. ಆದರೆ ಪುರಾಣದ ಅಭಿವ್ಯಕ್ತಿ ಕ್ರಮಕ್ಕೆ ಬದಲಾಗಿ ವಾಸ್ತವ ಮಾರ್ಗವನ್ನು ಅನುಸರಿಸಿದೆ. ಕುರ್ತಕೋಟಿಯವರೇ ಲೇಖನದಲ್ಲಿ ಒಂದೆಡೆ ಇದನ್ನು 'ಮಹಾಭಾರತದ ಕಾಲದಲ್ಲಿ ಸಂಭಾವ್ಯವೆಂದೆನಿಸಬಹುದಾದ ಮನುಷ್ಯ ಜೀವನವನ್ನು ವಿವರವಾಗಿ ಚಿತ್ರಿಸುವ ಕಾದಂಬರಿ' ಎಂದಿದ್ದಾರೆ. ಈ ಮಾತನ್ನು ಒಪ್ಪುವುದು ಸಾಧ್ಯವಿಲ್ಲ. ಏಕೆಂದರೆ 'ಸಂಭಾವ್ಯವೆನಿಸಬಹುದಾದ ಜೀವನ' ಎಂದೊಡನೆ 'ಪರ್ವ' ಊಹೆಯನ್ನಾಧರಿಸಿದ ಕೃತಿಯಾಗುತ್ತದೆ. ಮಹಾಭಾರತ ಕಾಲದ ಮೌಲ್ಯಗಳೇನೇ ಇದ್ದರೂ ಜೀವನಗತಿ ಸಮಕಾಲೀನಕ್ಕಿಂತ ಭಿನ್ನವಾಗಿತ್ತೆಂಬುದು ಸರಿಯಲ್ಲ. ಭೈರಪ್ಪನವರು 'ಮಾನವ ಅನುಭವದ ವಿವಿಧ ಮುಖ, ರೂಪ, ಮಾನವ ಸಂಬಂಧ ಸ್ವರೂಪ ಮತ್ತು ವಿವೇಚನೆ'ಗಳನ್ನು ಮುಖ್ಯವಾಗಿ ಪರಿಗಣಿಸುತ್ತಾರೆ. 'ಹುಟ್ಟು ಸಾವು' ಕುರಿತಂತೆ ಕೃಷ್ಣದ್ವೈಪಾಯನ ತನ್ನ ಮಗ ಶುಕನಿಗೆ ಹೇಳುವ ಮಾತುಗಳಲ್ಲಿ 'ಜೀವನ'ದ ನಿಜವಾದ ಅರ್ಥವಿದೆ. ಪರ್ವ ಮನುಷ್ಯ ಜೀವನವನ್ನು ಅರ್ಥೈಸುವ ಕೃತಿಯೂ ಹೌದು. "ಸಾವಿಗೆ ಏನಾದರೂ ಅರ್ಥವಿದ್ದರೆ ಹುಟ್ಟಿಗೂ, ಹುಟ್ಟಿಸುವುದಕ್ಕೂ ಉಂಟು. ಆಗ ಹುಟ್ಟುವ ವಿಧಾನಗಳ ತುಲನೆ ಮಾಡಿ ಉತ್ತಮ ಮಾಧ್ಯಮಗಳನ್ನೂ ಗುರುತಿಸಬಹುದು'' (ಪು. ೪೨೮). ಈ ಬಗೆಯ ತಾತ್ತ್ವಿಕ ಚಿಂತನೆ ಭೈರಪ್ಪನವರಿಗೇ ವಿಶಿಷ್ಟವಾದುದು. ಅವರ ಕಾದಂಬರಿಗಳಲ್ಲೆಲ್ಲ ಈ ಕುರಿತು ಚರ್ಚೆ ಬಂದೇ ಬರುತ್ತದೆ.

ಮಹಾಭಾರತ ಮುಖ್ಯವಾಗಿ ದಾಯಾದಿಗಳ ಯುದ್ಧ ಮತ್ತು ವಿನಾಶದ ಕಥೆ. ಪರ್ವ ಅದನ್ನಷ್ಟೇ ಹೇಳದೆ ಯುದ್ಧದ ಭೀಕರ ಪರಿಣಾಮಗಳತ್ತ ದೃಷ್ಟಿಸುತ್ತದೆ. ಮಹಾಭಾರತ ಯುದ್ಧಾನುತರ ಪಾಂಡವರ ವಿನಾ ಮಕ್ಕಳಾರೂ ಇಲ್ಲದಂಥ ಭೀಕರ ಪರಿಸ್ಥಿತಿಯೊಂದು ನಿರ್ಮಾಣವಾಗಿತ್ತು. ಎರಡು ಮಹಾಯುದ್ಧಗಳೇ ಅಲ್ಲದೆ ದೇಶ ದೇಶಗಳ ನಡುವೆ ನಡೆಯುತ್ತಿರುವ ಯುದ್ಧಗಳ

ಪರಿಣಾಮವೂ ಇದೇ. ೧೯೬೫ರ ಭಾರತ–ಪಾಕ್ ಯುದ್ಧದಲ್ಲಿ ಪಂಜಾಬಿ ಸೈನಿಕರು ಸಾವಿರಾರು ಸಂಖ್ಯೆಯಲ್ಲಿ ಸತ್ತಾಗ, ಅವರ ಹೆಂಡಂದಿರು, ಗಂಡಂದಿರ ಸೋದರರರೊಂದಿಗೆ 'ಛಡ್ಡರ್ ದಾಲನಾ' ಪದ್ಧತಿಯ ಮೂಲಕ ಮರುಮದುವೆ ಮಾಡಿಕೊಂಡುದು ಕೂಡ ಮಹಾಭಾರತದ ಸಂಸ್ಕೃತಿಗೆ ಹತ್ತಿರವಾಗಿದೆಯೆಂದು ಲೇಖಕರು ಭಾವಿಸಿದ್ದಾರೆ. ಹೀಗೆ ಮಾನವೀಯ ಸಂಬಂಧಗಳ ಸೂಕ್ಷ್ಮಸ್ತರವನ್ನು ಪರ್ವ ನಿರೂಪಿಸುತ್ತದೆ. ಕುರ್ತಕೋಟಿಯವರು ಇದನ್ನು ಇಂಗ್ಲಿಷ್‌ನಿಂದ ನಿಯೋಗಗೊಂಡ ಕೃತಿ ಎಂದು ಕರೆಯುತ್ತಾರೆ : 'ಪರ್ವ ಆರ್ಯರ ಅನಾರ್ಯತ್ವವನ್ನು ಎತ್ತಿ ತೋರಿಸುತ್ತದೆ. ಆದರೆ ಮಹಾಭಾರತದ ಉದ್ದೇಶ ಧರ್ಮದ ಅನ್ವೇಷಣೆ. ಆ ಕಾರಣ ಪೌರಾಣಿಕತೆಯೇ ಮಹಾಭಾರತದ ಜೀವಾಳ. ಪೌರಾಣಿಕತೆಯನ್ನು ಬಿಟ್ಟಿರುವ 'ಪರ್ವ'ದ ಸನ್ನಿವೇಶಗಳು ಅಮಾನವೀಯಗೊಂಡಿವೆ ಎಂದಿದ್ದಾರೆ. ಆದರೆ ಇಲ್ಲಿ ಕುರ್ತಕೋಟಿಯವರು ಹೇಳುವಂತೆ ಧರ್ಮವೂ ಇದೆ. ಅದು ಮಾನವಧರ್ಮ. ಆರ್ಯರ ಅನಾರ್ಯತ್ವದ ಬಗ್ಗೆಯೂ ಹೇಳುವುದಾದರೆ ವಿಚಿತ್ರವೀರ್ಯ, ಚಿತ್ರಾಂಗದರ ಮರಣಾನಂತರ ಧೃತರಾಷ್ಟ್ರ, ಪಾಂಡು, ವಿದುರರ ಜನನ ಎಂಥದು? ಹೇಗೆ? ಹಾಗಾಗಿ ಪರ್ವ ಅನಾವರಣಗೊಳಿಸುವ ವಿಚಾರಗಳು ಲುಪ್ತವಾಗಿರುವ 'ಮಾನವ ಧರ್ಮ'ವನ್ನೇ ಹೇಳುತ್ತಿವೆ.

ಡಾ. ಕೆ. ವಿ. ನಾರಾಯಣ ಮತ್ತು ಕ. ವೆಂ. ರಾಜಗೋಪಾಲ್ ಇಬ್ಬರೂ ಪರ್ವದ ಸಾಮಾಜಿಕ ಒಳನೋಟದೆಡೆಗೆ ಗಮನಿಸುತ್ತಾರೆ : "ಪರ್ವ: ಯುದ್ಧ ಸನ್ನದ್ಧ ಸ್ಥಿತಿಯನ್ನು ಆ ಹಂತವನ್ನೂ ಸೂಚಿಸುತ್ತದೆ. 'ಪರ್ವ'ವೆಂದರೆ ಹೆಣ್ಣುಗಳು ಎಂಬ ಅರ್ಥಕೂಡ ಇದೆ. (ಮಹಾಕಾವ್ಯದ ಅಧ್ಯಾಯಗಳನ್ನು ಪರ್ವಗಳೆನ್ನುವುದು ಇದೇ ಅರ್ಥದಲ್ಲಿ.) ಇಲ್ಲಿ ಕಥನ ಕೂಡ ಒಂದೊಂದು ಮನಸ್ಸಿನ ನೆನಪುಗಳ ಮೂಲಕ ಚೂರು ಚೂರಾಗಿ ನಿರ್ಮಾಣಗೊಳ್ಳುತ್ತದೆ....... 'ಪರ್ವ'ದಲ್ಲಿ ಚರ್ಚಿಸಲಾದ ಮುಖ್ಯಪ್ರಶ್ನೆಯೆಂದರೆ ಸಮಾಜ ವ್ಯವಸ್ಥೆಯ ಪರಿವರ್ತನೆಯ ಘಟ್ಟದಲ್ಲಿ 'ಹೆಣ್ಣಿನ ಸ್ಥಾನ', ಶಲ್ಯನ ಮೊಮ್ಮಗಳ ಋತುಚಕ್ರ ವೈಫಲ್ಯದ ಕಥನದಿಂದ ಪ್ರಾರಂಭವಾದದ್ದು, ಯುದ್ಧದ ಉತ್ಕ್ರಾಂತ ಸ್ಥಿತಿಯಲ್ಲಿ ಸೈನಿಕರಿಂದ ಬಲಾತ್ಕಾರಕ್ಕೊಳಗಾಗಿ ಗರ್ಭಿಣಿಯರಾದ ಹೆಂಗಸರ ಚಿತ್ರದಲ್ಲಿ ಮುಗಿಯುತ್ತದೆ. ಈ ನಡುವೆ ಎಷ್ಟೋ ಹೆಣ್ಣುಗಳ ಕಥನ ಬಂದು ಹೋಗುತ್ತದೆ. ವಿವಿಧ ಲಯಗಳ ಮೇಳದ ದನಿಯಿಂದ ಹುಟ್ಟುವ ವಿಕೃತ ಭಾವವೊಂದು ಕಾದಂಬರಿಯಲ್ಲಿ ಸ್ಥಾಯಿಯಾಗುವುದು. ನಿಯೋಗ, ಬಹುಪತಿತ್ವ, ಬಹುಪತ್ನಿತ್ವ, ಸ್ತ್ರೀಪ್ರಧಾನ ಬುಡಕಟ್ಟು ಮನುಷ್ಯ–ರಾಕ್ಷಸ ಸಂಬಂಧದ ಜನನ, ಬ್ರಹ್ಮಚರ್ಯ–ಹೀಗೆ ಹಲವು ಬಗೆಯ ಜೀವನ ಕ್ರಮಗಳ ಪರಸ್ಪರ ಮುಖಾಮುಖಿಯಿಂದ ಯುದ್ಧ ಸ್ಫೋಟಗೊಂಡಿದೆ. ನಿರ್ಣಾಯಕ ಹಂತವೊಂದನ್ನು ಕಾದಂಬರಿ ತಲುಪಿದೆ. [ಕಾದಂಬರಿ ಎಂದರೆ ಇಲ್ಲಿ ವರ್ಣಿತವಾದ ಜೀವನಕ್ರಮ] ತನ್ನ ಇರುವಿಕೆಯನ್ನು ಹೆಂಗಸರು ಎಲ್ಲಿ ಗುರುತಿಸಿಕೊಳ್ಳಬೇಕು. ಇದಕ್ಕೆ ಇಲ್ಲಿನ ಒಬ್ಬೊಬ್ಬ ಹೆಂಗಸೂ ಕಂಡುಕೊಳ್ಳುವ ಉತ್ತರಗಳು ಬಗೆ ಬಗೆಯಾಗಿವೆ. ಹೀಗಾದರೂ ಬದುಕಿನ ಲಯಗಳು ಎತ್ತಲೋ ಒಂದು ಗಂಡು ಒಂದು ಹೆಣ್ಣು ಎಂಬ ನೆಲೆಗೆ ತಲುಪುತ್ತಿದೆಯೆಂಬ ಆದರೆ ಜೀವನದ ಒಟ್ಟು ಒತ್ತಡ ಆದನ್ನೂ ಮೀರಿ 'ಅಕ್ರಮ' ಸಂಬಂಧಗಳ ಕಡೆಗೂ ನುಗ್ಗುವುದೆಂಬ ವಿಚಾರವೊಂದು ಮಂಡಿತವಾದಂತಿದೆ." (ಪರ್ವ–ಒಂದು ಸಮೀಕ್ಷೆ : ಪು

೪೧–೪೨). ಮಹಾಭಾರತದ ಪೌರಾಣಿಕ ಆಯಾಮಗಳಲ್ಲಿ ಸಾಧ್ಯವಾಗದ ಈ ಸೂಕ್ಷ್ಮ ಸಾಮಾಜಿಕ ಚಿಂತನೆಯು ಪರ್ವದಲ್ಲಿ ಮೇಳೈಸಿ ವಿಶಿಷ್ಟವಾಗಿದೆ. ಹೆಣ್ಣಿನ ಸ್ಥಾನಮಾನದ ನಿರ್ಣಯದಿಂದಾಗಿಯೇ ಮಹಾಭಾರತಾದಿ ಯುದ್ಧಗಳು ಘಟಿಸಿದ್ದರೂ ಆಕೆಯ ವೈಯಕ್ತಿಕ ಸ್ಥಾನಮಾನ ಅಲ್ಲಿ ನಿರ್ಣಿತವಾಗಿಲ್ಲ. ಪರ್ವ ಒಳಗೊಂಡಿರುವ ಈ ಹೊಸದೃಷ್ಟಿಕೋನ ಗಮನಾರ್ಹವಾದುದು. ಎಸ್. ಆರ್. ವಿಜಯಶಂಕರರು ಹೇಳುವಂತೆ 'ಮನುಷ್ಯ ಸ್ವಭಾವದ ಸತ್ಯಗಳನ್ನು ಶೋಧಿಸಲು ಪ್ರಯತ್ನಿಸುತ್ತಾನೆ' (ಮನೋಗತ –೪೩). ಲೇಖಕರು ಈ ಕೃತಿಯಲ್ಲಿ ಮುಂದುವರೆದು 'ಪರ್ವ' ಇಷ್ಟಾಗಿಯೂ ಇರಾವತಿ ಕರ್ವೆಯವರ 'ಯುಗಾಂತ'ದಂತೆ ಒಂದು ಸಂಶೋಧನಾ ಕೃತಿಯಾಗಿಲ್ಲ. ಭೈರಪ್ಪನವರ ದೃಷ್ಟಿಕೋನವೇನೆಂಬುದರ ಹಿನ್ನೆಲೆಯಲ್ಲಿ ಈ ವಿಚಾರವನ್ನು ಪರಿಶೀಲಿಸಬಹುದು : "ಜೀವನದಲ್ಲಿ ಸಾವಿನಷ್ಟು ಸತ್ಯವಾದದ್ದು ಬೇರಾವುದೂ ಇಲ್ಲ. ಈ ಹಿನ್ನೆಲೆ ಬುದ್ಧಿ, ಮನಸ್ಸು, ಅಂತಃಕರಣಗಳ ಆಳವನ್ನು ಮುಟ್ಟಿ ನಿಂತರೆ ಮಾನವ ಸಂಬಂಧ ಮಾನವ ಸಾಮಾಜಿಕ ವ್ಯವಸ್ಥೆಗಳಲ್ಲಿ ನಾವು ರೂಪಿಸಿಕೊಂಡಿರುವ ನೀತಿ ನಿಯಮಗಳ ಜೊಳ್ಳು–ಹರುಳುಗಳು ಅರ್ಥವಾಗುತ್ತವೆ. ರೂಢಿಯೇ ನಮ್ಮ ಬಹುತೇಕ ನಂಬಿಕೆಗಳ ಮೂಲ. ಇವನ್ನೆಲ್ಲ ಬಿಟ್ಟು ಜೀವನದ ಕೊನೆಯ ಸಾವಿನ ದೃಷ್ಟಿಯಿಂದ ಜೀವನವನ್ನೂ ನೋಡಿದರೆ ಹೊಸ ಅರಿವು ಹುಟ್ಟಬಹುದು... (ನಾನೇಕೆ ಬರೆಯುತ್ತೇನೆ–೫೩). ಈ ಮಾತುಗಳು 'ಪರ್ವ' ಜೀವನ ಸಂಶೋಧಿತ ಕೃತಿ ಎಂಬುದನ್ನು ಮನಗಾಣಿಸುತ್ತವೆ. ಮಿತ್ ಅನ್ನು ಒಪ್ಪಿಕೊಂಡು ಆ ಮೂಲಕ 'ಚಿರನೂತನ ಮೌಲ್ಯ'ಗಳನ್ನು ಪ್ರತಿಪಾದಿಸಿರುವುದು ಒಂದು ವಿಧಾನ (ಉದಾ. ಶ್ರೀ ರಾಮಾಯಣ ದರ್ಶನಂ). ಅಂತೆಯೇ ಮಿತ್‌ಅನ್ನು ನಿರಾಕರಿಸಿ 'ಮಾನವೀಯತೆಯುತ ಸಾಮಾಜಿಕ ನೆಲೆ'ಯಿಂದ ಪುರಾತನ ಕತೆಯನ್ನು ವಿಶ್ಲೇಷಿಸಿರುವುದು ಮತ್ತೊಂದು ವಿಧಾನ. ಭೈರಪ್ಪನವರ ಪರ್ವ ಎರಡನೆಯ ಬಗೆಯದು.

ಈ ಅಂಶದ ಹಿನ್ನೆಲೆಯಲ್ಲಿ ಕ. ವೆಂ. ರಾಜಗೋಪಾಲ್ ಕೆಲವು ಮುಖ್ಯ ವಿಚಾರಗಳನ್ನು ಹೇಳಿದ್ದಾರೆ: "..... ಭಾರತೀಯ ದಾಂಪತ್ಯ – ಸಂತಾನ ಮತ್ತು ಉತ್ತರಾಧಿಕಾರಿ ಅಥವಾ ಕುಲದ ಅಭಿವೃದ್ಧಿ ಇಷ್ಟೆಲ್ಲ 'ಪರ್ವ'ದ ಮುಖ್ಯವಸ್ತು ಮತ್ತು ಅದರ ಮುಖಗಳು. ಕಥೆಯು ಇಲ್ಲಿ ಭಾರತ ಯುದ್ಧದ ನಾಲ್ಕಾರು ದಿನಗಳಲ್ಲಿ ಅಂದರೆ ಸಿದ್ಧತೆಯ ಸಮಯದಲ್ಲಿ ಪ್ರಾರಂಭವಾಗಿ ಮಹಾಭಾರತದ ಮೊದಲೈದು ಪರ್ವಗಳನ್ನೂ ಒಳಗೊಂಡಂತೆ ಮೊದಲಾಗುತ್ತದೆ. ನಂತರ ಯುದ್ಧದ ಹದಿನೆಂಟು ದಿನಗಳನ್ನು ಒಳಗೊಂಡು ಕಥೆಯಾಗುತ್ತದೆ. ಇಲ್ಲಿ ಯುದ್ಧವೆಂದರೆ ಪ್ರತಿಯೊಬ್ಬ ವ್ಯಕ್ತಿಯೂ ಸಾವನ್ನು ಎದುರಿಸುವುದು. ಅಲ್ಲದೆ ಹಾಗೆ ಎದುರಿಸುವಾಗ ತನ್ನ ಪರಿಸರದಲ್ಲಿ ಬೆಳೆಸಿಕೊಂಡು ಬಂದ ವ್ಯಕ್ತಿತ್ವವನ್ನು ಪಣವಾಗಿ ಒಡ್ಡುವುದು. ಆದುದರಿಂದ ಯುದ್ಧವು ಹಲವು ಬಗೆಯ ಸೇಡಿನ ಮುದ್ದೆಯಾಗುತ್ತದೆ. ಬದುಕಿನ ವಾಸ್ತವತೆಯ ಪರೀಕ್ಷೆಯಾಗುತ್ತದೆ. ಗೆದ್ದವನೂ ತನ್ನ ಸೋಲನ್ನೂಪ್ಪಿಕೊಳ್ಳಬೇಕಾದೀತು. ಹೀಗೆ ಇಡೀ ಬದುಕೇ ಯುದ್ಧದಲ್ಲಿ ಸಂಘರ್ಷಕ್ಕೆ ಒಳಗಾಗುವುದರಿಂದ ಆಧ್ಯಾತ್ಮಿಕವನ್ನು ಪಣವಾಗಿರಿ 'ದೈವಿಕವನ್ನು ಲೆಕ್ಕಿಸದೆ ಬದುಕಿನ ನ್ಯಾಯವಾದ ಬೆಲೆಯನ್ನು ಅರ್ಥೈಸಲು ಯುದ್ಧವು ಆಶ್ಚರ್ಯಕರವಾದ ಸಾಧನವಾದೀತು!....... ಇಂಥ ವಿಚಾರಗಳಲ್ಲೆಲ್ಲಾ 'ಪರ್ವ' ನಿಲ್ಲುತ್ತದೆ. ಓದುಗನು ತನ್ನನ್ನೇ ಶೋಧಿಸಿಕೊಳ್ಳಲು ಅವಕಾಶಕೊಡುತ್ತದೆ'' (ಭೈರಪ್ಪಾಭಿನಂದನಾ – ೭೬). ಪೌರಾಣಿಕತೆಯಲ್ಲಿ ವೈಯಕ್ತಿಕ ಆತ್ಮ ಶೋಧನೆಗೆ ಸಾಧ್ಯವಾಗದ ಅಂಶವನ್ನು ಪರ್ವ ಈ

ಮೂಲಕ ಒಳಗೊಂಡು ವಿಶಿಷ್ಟವಾಗಿದೆ. ಕೆ. ಎಲ್. ಗೋಪಾಲಕೃಷ್ಣಯ್ಯನವರು ಇದನ್ನು 'ವೈಚಾರಿಕ' ಕೃತಿ ಎಂದು ಕರೆಯುತ್ತಾರೆ. ಡಾ. ಚಂದ್ರಶೇಖರ ಕಂಬಾರರು ಇದನ್ನು 'ಸೃಜನಾತ್ಮಕ ಪ್ರತಿಕ್ರಿಯೆ' ಎಂದು ವಿಶ್ಲೇಷಿಸಿದ್ದಾರೆ : "ವರ್ತಮಾನ ಮತ್ತು ಭೂತ ಇವೆರಡನ್ನೂ ಕುರಿತು ಏಕಕಾಲಕ್ಕೆ ನುಡಿಯಬಲ್ಲ ಒಡಲೊಂದನ್ನು ಈ ಕೃತಿಯಲ್ಲಿ ಅವರು ರೂಪಿಸಿಕೊಂಡಿದ್ದಾರೆ. ಇದನ್ನು ಕಟ್ಟಲು ಬೇಕಾದ ಶರೀರ ಸಾಮಗ್ರಿ ನಮ್ಮ ಸಂಸ್ಕೃತಿಯ ಒಂದು ಪೂರ್ವತುದಿಯಾಗಿರುತ್ತೆ. ಅದರ ಸದ್ಯದ ತುದಿ ನಮ್ಮ ಬದುಕಿನ ಅಂತರಾಳಗಳನ್ನು ಶೋಧಿಸುವಂತೆ ಕಾಣುತ್ತದೆ. ಇದಕ್ಕೆ ಕಾರಣ : ಅವರು ಮಹಾಭಾರತದ ಪ್ರಾಚೀನ ಪಾತ್ರಗಳನ್ನು ಬಳಸಿ ನಿಂತ ಪುರಾಣ ಪರಿವೇಷವನ್ನು ಅದರ ನಿಜಾರ್ಥದ ಶೋಧನೆಯ ಸಲುವಾಗಿ ಕಳಚಿರುವುದು.... ಇದುವರೆಗೆ ಭಾರತಕ್ಕೆ ವಿಮರ್ಶಾತ್ಮಕ ವ್ಯಾಖ್ಯಾನಗಳಿದ್ದುವೇ ಹೊರತು ಸೃಜನಾತ್ಮಕ ಪ್ರತಿಕ್ರಿಯೆಗಳಿರಲಿಲ್ಲ. ಇದ್ದರೂ ಅವು ಮೂಲದ ಮುಖ್ಯ ನಿಲುವನ್ನು ಎಲ್ಲಿಯೂ ವ್ಯತ್ಯಸ್ತಗೊಳಿಸುವ ಸಾಹಸಪೂರ್ಣ ಜವಾಬ್ದಾರಿಗೆ ಕೈ ಹಾಕಿರಲಿಲ್ಲ. .. ಹಳಗನ್ನಡದಲ್ಲಿ ಕುಮಾರವ್ಯಾಸ ತಮ್ಮ ಪ್ರತಿಭಾ ದೃಷ್ಟಿಗನುಗುಣವಾಗಿ ಭಾರತವನ್ನು ಸ್ವೀಕರಿಸಿದಂತೆ ಹೊಸಗನ್ನಡದಲ್ಲಿ ಅದನ್ನು ಭೈರಪ್ಪ ಭಿನ್ನ ಪ್ರಕಾರದಲ್ಲಿ ಸ್ವೀಕರಿಸಿದ್ದಾರೆ'' (ಪರ್ವ : ಒಂದು ಸಮೀಕ್ಷೆ – ೧೦೬ ೧೦೭). ಡಾ. ಕಂಬಾರರ ಈ ಮಾತುಗಳು 'ಪರ್ವ' ಕೃತಿಯ ಅಧ್ಯಯನಕ್ಕೆ ಕೆಲವು ವಿಶಿಷ್ಟ ಅಂಶಗಳನ್ನು ಒದಗಿಸುತ್ತವೆ. ಅಲ್ಲದೆ 'ಪರ್ವ' ಈ ಶತಮಾನದ ಬದುಕಿನ ಸಂವೇದನೆಗಳಂತೆಯೇ ದ್ವಾಪರಯುಗದ ಸಂವೇದನೆಗಳೂ ಎಷ್ಟು ಸಾಮಾನ್ಯವಾಗಿದ್ದವು ಎಂಬುದನ್ನು ಗುರುತಿಸುತ್ತದೆ. ಈ ಬಗೆಯ 'ಹೊಸನೆಲೆ'ಯ ವ್ಯಾಖ್ಯಾನ ಗೃಹಭಂಗ, ಸಾಕ್ಷಿ, ಅಂಚು ಮೊದಲಾದ ಕೃತಿಗಳಲ್ಲೂ ಕಂಡುಬರುತ್ತದೆ.

ಭೈರಪ್ಪನವರು ಈ ಹದಿನೇಳು ಕಾದಂಬರಿಗಳೊಂದಿಗೆ 'ನಾನೇಕೆ ಬರಯುತ್ತೇನೆ', 'ಸತ್ಯ ಮತ್ತು ಸೌಂದರ್ಯ', 'ಕಥೆ ಮತ್ತು ಕಥಾವಸ್ತು' ಹಾಗೂ 'ಸಾಹಿತ್ಯ ಮತ್ತು ಪ್ರತೀಕ' ಎಂಬ ನಾಲ್ಕು ಸೃಜನೇತರ ಕೃತಿಗಳನ್ನು ರಚಿಸಿದ್ದಾರೆ. ಈ ಕೃತಿಗಳಲ್ಲಿ ಭೈರಪ್ಪನವರು ಕೃತಿಯ ಸ್ವರೂಪ ಮತ್ತು ವಿಮರ್ಶಕರ ಮನೋಭಾವ ಎರಡನ್ನೂ ಗಂಭೀರವಾಗಿ ವಿವರಿಸಿದ್ದಾರೆ. ವಿಮರ್ಶೆ ಮುಖ್ಯವಾಗಿ ಕೃತಿಯ ಸಹಜತೆಯನ್ನು ಎತ್ತಿ ಹಿಡಿಯುವಂಥದಾಗಿರಬೇಕು. ಪಾಶ್ಚಾತ್ಯ ವಿಮರ್ಶಾ ಮಾರ್ಗದಿಂದಾಗಿ ಕನ್ನಡ ವಿಮರ್ಶಕರು ಅನೇಕ ಅಪ್ರಿಯ ಸತ್ಯಗಳನ್ನು ಮುಚ್ಚಿಡುತ್ತಿದ್ದಾರೆ ಎಂಬುದು ಭೈರಪ್ಪನವರ ಮುಖ್ಯ ಆಪಾದನೆಯಾಗಿದೆ. ಅದಕ್ಕೆ ನಿದರ್ಶನವಾಗಿ ಈ ಕೆಲವು ಮಾತುಗಳನ್ನು ಹೇಳುತ್ತಾರೆ : ".....ಒಂದು ವರ್ಷದ ಹಿಂದೆ ಪ್ರಕಟವಾದ 'ಗತಿ ಸ್ಥಿತಿ' ಕಾದಂಬರಿ ಬಗೆಗೆ ಎಷ್ಟೆಲ್ಲಾ ಉತ್ಸಾಹದ ವಿಮರ್ಶೆ ಬಂತು. ಅದನ್ನು ಬರೆದ ಯಾರೂ ಕಾಫ್ಕಾನ Castle ಅನ್ನು ಓದಿಲ್ಲವೆಂದು ನಂಬಲಾಗುವುದಿಲ್ಲ. ಹಾಗೆ ನೋಡಿದರೆ ನಮ್ಮ ಉತ್ಸಾಹಿ ಲೇಖಕರು ಮತ್ತು ವಿಮರ್ಶಕರಲ್ಲಿ ಬಹುತೇಕ ಜನರು ಕಾಫ್ಕಾ, ಕಾಮೂ, ಸಾರ್ತ್ರೆ, ಲಾರೆನ್ಸರ ಶಿಷ್ಯವರ್ಗದವರೇ. ಅವರಲ್ಲಿ ಯಾರೂ 'ಗತಿಸ್ಥಿತಿ'ಯ ಬರವಣಿಗೆ ಪ್ರತಿಮೆಗಳು ಮೊದಲಾದ ಪ್ರಧಾನಾಂಶಗಳು ಕಾಫ್ಕಾನದು ಎಂದು ಸ್ಪಷ್ಟವಾಗಿ ಹೇಳಲಿಲ್ಲ. ಭಾರತೀಪುರದ ಮೇಲೆ ಬರೆದಿರುವ ಯಾರೂ ಸಾರ್ತ್ರೆ, ಮಾರ್ಕ್ಸ್, ಲಾರೆನ್ಸರ ಬಲ್ಬುಗಳ ಅಲಂಕರಣವನ್ನು ಹೇಳಲಿಲ್ಲ'' (ನಾನೇಕೆ ಬರೆಯುತ್ತೇನೆ – ೬೯). ಭೈರಪ್ಪನವರ ಈ

ಮಾತುಗಳು 'ವಿಮರ್ಶೆ ಸತ್ಯ'ವನ್ನು ಎತ್ತಿ ಹಿಡಿಯುವುದು ಅವಶ್ಯಕವೆಂಬುದನ್ನು ಹೇಳುತ್ತವೆ. ಮುಂದುವರೆದು ಅನಂತಮೂರ್ತಿಯವರ 'ಭಾರತೀಪುರ'ವು ರಾಮಚಂದ್ರದೇವ ಅವರ 'ದಂಗೆಯ ಪ್ರಕರಣದ' ವಿಸ್ತೃತ ರೂಪವೆಂದು ಪ್ರಕಟಣಾ ವರ್ಷದ ಆಧಾರದ ಮೇಲೆ ಸ್ಪಷ್ಟಪಡಿಸುತ್ತಾರೆ.

ಸಾಹಿತ್ಯ ಮತ್ತು ಇತರೆಲ್ಲ ವಿಜ್ಞಾನಗಳನ್ನು ಎಡ–ಬಲ ಎಂದು ಮುಂತಾಗಿ ವಿಂಗಡಿಸುವುದನ್ನು ಭೈರಪ್ಪನವರು ಒಪ್ಪುವುದಿಲ್ಲ. ಇವರ ಪ್ರಕಾರ 'ಅನುಭವ'ವೇ ಮುಖ್ಯ. ವಿಮರ್ಶೆಕೂಡ ಅನುಭವದ ಪ್ರಾಮಾಣಿಕತೆಯನ್ನು ಮೌಲ್ಯಮಾಪನ ಮಾಡಬೇಕು ಎನ್ನುತ್ತಾರೆ : "ಪ್ರತಿಯೊಬ್ಬ ಲೇಖಕನ ಅನುಭವವೂ ಸೀಮಿತವಾದುದು. ನಮ್ಮ ದೇಶದಲ್ಲಿ ಜಾತಿ ಪಂಗಡಗಳು ನಮ್ಮ ಅನುಭವಕ್ಕೆ ಒಂದು ಮಿತಿಯನ್ನು ಹಾಕುತ್ತವೆ. ಜೊತೆಗೆ ನಮ್ಮ ಉದ್ಯೋಗ, ವಾಸಿಸುವ ಸ್ಥಳ, ಗ್ರಾಮ–ನಗರ, ಮೊದಲಾದ ಪರಿಸರ ಭೇದಗಳು, ಹೀಗೆ ಹಲವು ಮಿತಿಗಳಲ್ಲಿ ನಾವು ಬಾಳುತ್ತೇವೆ. ಪಶ್ಚಿಮದ ಲೇಖಕರ ಅನುಭವಕ್ಕೂ ಇಂಥ ಮಿತಿಗಳಿವೆ. ಈ ಮಿತವಾದ ಅನುಭವದಲ್ಲೂ ಹುದುಗಿರುವ ಸಂಕೇತ ಅಥವಾ ಧ್ವನಿಗಳನ್ನು ಹುಡುಕುವುದರ ಮೂಲಕ ಮಾತ್ರ ಸಾಹಿತಿಯು ತನ್ನ ಮಿತಿಯಿಂದ ಮೇಲೆ ಏರಬಹುದು. ಈ ಅಂಶವನ್ನು ತಿಳಿಯದೆ ಸಾಹಿತಿಯ ಹುಟ್ಟು, ಜಾತಿ ಮೊದಲಾದುವುಗಳನ್ನು ಅನ್ವಯಿಸಿ ಅವನ ಕೃತಿಗಳ ಬೆಲೆ ಕಟ್ಟುವುದು ಅಥವಾ ಗೇಲಿ ಮಾಡುವುದು ಅಸಾಹಿತ್ಯಿಕ ಕ್ರಿಯೆಯಾಗುತ್ತದೆ. ಇಷ್ಟೆಲ್ಲ ಹಿನ್ನಲೆಯನ್ನು ವಿವರಿಸದ ನಂತರವೂ ಈ ಚಳವಳಿಗಳು ತೋರಿಸುವ ಒಂದಂಶವನ್ನು ಎಲ್ಲಾ ಲೇಖಕರೂ ಗಮನಿಸಬೇಕು. ಜೀವನದ ಸಮಗ್ರತೆಯಲ್ಲಿ ಪಾಲುಗೊಳ್ಳುವ ದೃಷ್ಟಿಯಿಂದಲಾದರೂ ಲೇಖಕನು ಬಡತನ, ಅಜ್ಞಾನ, ದಲಿತತೆ ಮೊದಲಾದ ಇತರ ವರ್ಗ ಅಥವಾ ವಲಯಗಳಲ್ಲಿ ಬೆರೆತು ಅನುಭೂತಿಯನ್ನಾದರೂ ಪಡೆಯಬೇಕು...." (ನಾನೇಕೆ ಬರೆಯುತ್ತೇನೆ – ೧೨೫). ಸಾಹಿತ್ಯ ಘೋಷಣೆಯಾಗದೆ ಅನುಭಾವಾತ್ಮಕ ಕಲೆಯಾಗಬೇಕೆಂಬ ಭೈರಪ್ಪನವರ ಈ ಮಾತುಗಳು ಅವರ ಕೃತಿಗಳನ್ನು ವಿಮರ್ಶಿಸಿದ ಲೇಖಕರಿಗೆ ಕೊಟ್ಟ ಉತ್ತರವೂ ಆಗಿದೆ.

ಭೈರಪ್ಪನವರು ಸಾಹಿತ್ಯ ವಿಮರ್ಶೆ ತತ್ತ್ವಜ್ಞಾನವನ್ನು ಒಳಗೊಂಡಿರಬೇಕು ಎಂದು ಹೇಳುತ್ತಾರೆ. (ರೆನೆವೆಲೆಕ್ ಕೂಡ ಹೀಗೆಯೇ ಹೇಳಿದ್ದಾಗ ಎಫ್. ಆರ್. ಲೀವಿಸ್ Literary Critcism and Philosophy ಎಂಬ ಪ್ರಬಂಧ ಬರೆದುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು.) ರಿಚರ್ಡ್ಸ್, ಬ್ರಾಡ್ಲೆ, ಟಿ.ಎಸ್.ಎಲಿಯಟ್ ಮುಂತಾದವರ ವಿಮರ್ಶೆಗಳು ತತ್ತ್ವಜ್ಞಾನದ ಆಧಾರವುಳ್ಳವಾಗಿರುವುದರಿಂದಲೇ ಗಂಭೀರವಾಗಿವೆ. ಹಾಗೆಯೇ ಕನ್ನಡದಲ್ಲೂ ಬೇಂದ್ರೆ, ಪುತಿನ, ವಿ.ಸೀ, ಶ್ರೀರಂಗ ಮೊದಲಾದವರು ನಮ್ಮ ಪರಂಪರೆಯ ತಾತ್ತ್ವಿಕ ಜ್ಞಾನದಿಂದಾಗಿ ಬಹುಮುಖ್ಯ ಲೇಖಕರಾಗಿದ್ದಾರೆಂಬುದು ಭೈರಪ್ಪನವರ ಅಭಿಪ್ರಾಯ.

ಅವರ 'ಸಾಹಿತ್ಯ ಮತ್ತು ಪ್ರತೀಕ'ದಲ್ಲಿ ಪ್ರತೀಕ, ಪುರಾಣದ ವಿಚಾರಗಳನ್ನೂ ತಾತ್ವಿಕ ಹಿನ್ನಲೆಯಲ್ಲಿಯೇ ಚರ್ಚಿಸಿದ್ದಾರೆ. 'ಸಾಹಿತ್ಯ ಅನನ್ಯವಾದುದು' ಎಂಬ ವಿಚಾರದೊಂದಿಗೆ 'ಎಲ್ಲಾ ಕಾಲದ ಸಾಹಿತ್ಯವೂ ಒಂದು ಅರ್ಥದಲ್ಲಿ ಪ್ರತೀಕಾತ್ಮಕವೇ' ಎಂದು ಹೇಳುತ್ತಾರೆ. ಪುರಾಣ ಮುಖ್ಯವಾಗಿ ಜೀವನವನ್ನು ಹೇಳುತ್ತದೆ. ಸಾಹಿತ್ಯ ಪುರಾಣದ ಅನೇಕ ಅಂಶಗಳನ್ನು ತನ್ನ

ವಸ್ತುವಾಗಿ ಸ್ವೀಕರಿಸಿರುವುದರಿಂದಾಗಿ ಸಾಹಿತ್ಯ ವಿಮರ್ಶೆ ಈ ಎಲ್ಲವನ್ನು ಸೂಕ್ಷ್ಮವಾಗಿ ಗಮನಿಸಬೇಕು. ಆ ಕಾರಣ ವಿಮರ್ಶಕನಿಗೆ ತತ್ತ್ವಜ್ಞಾನದ ಅರಿವು ಅತ್ಯವಶ್ಯವೆಂದು ಭೈರಪ್ಪನವರು ಮತ್ತೆ ಮತ್ತೆ ಹೇಳುತ್ತಾರೆ.

ಈ ಬಗೆಯ ಮೌಲ್ಯ ವಿವೇಚನೆಗೆ ಲೇಖಕರು 'ಪರಂಪರೆ'ಯ ಕೂಡ ಮುಖ್ಯವೆನ್ನುತ್ತಾರೆ. ರಸೋದ್ದೀಪನೆ ಮತ್ತು ದರ್ಶನ ಮೂಲವಾಗಬೇಕು ಸಾಹಿತ್ಯ. ಹಾಗಾಗಿ ಮೌಲ್ಯಸಂವೇದನೆ ಸಾಹಿತ್ಯದಲ್ಲಿರುತ್ತದೆ. ಅದು ಸಾಧನಾವಾದೀ ದೃಷ್ಟಿ ಇಂದ್ರಿಯಾನುಭವವಾದೀ ಮೌಲ್ಯ ಸಿದ್ಧಾಂತ, ವಸ್ತುನಿಷ್ಠ ಮೌಲ್ಯ ಸಿದ್ಧಾಂತ, ಧ್ಯೇಯ ಮತ್ತು ಸಾಧನ, ಮೌಲ್ಯ ನಿಕಷ–ಈ ಮೊದಲಾದ ಅಂಶಗಳು 'ಮೌಲ್ಯ ಸಂವೇದನೆ'ಯ ವಿಚಾರಗಳೆಂದು ಹೇಳಿ, ಆ ಬಗ್ಗೆ ವಿವರಿಸುತ್ತಾರೆ. ಪ್ರತಿಯೊಂದರಲ್ಲೂ ಕಾರ್ಯ–ಕಾರಣ ಸಂಬಂಧವನ್ನು ಗುರುತಿಸುವ ಭೈರಪ್ಪನವರು ಜೀವನ ಮತ್ತು ಅದನ್ನು ವ್ಯಾಪಿಸಿರುವ ಮೌಲ್ಯಗಳು ಹೆಚ್ಚು ಮಹತ್ವದವೆಂದು ಪರಿಗಣಿಸುತ್ತಾರೆ. ಸಾಹಿತ್ಯದಂತೆ ಇತರ ಕಲೆಗಳು ಜೀವನ ಮೌಲ್ಯಗಳನ್ನು ಪ್ರತಿಪಾದಿಸುತ್ತವೆ; ಆದರೆ ಸಾಹಿತ್ಯದಲ್ಲಿ ಸಂಕೀರ್ಣತೆ ಹೆಚ್ಚು : "...... ನಮ್ಮ ಮೌಲ್ಯ ಸಂವೇದನೆಯನ್ನು ಉದ್ದೀಪಿಸುವುದು ಸಾಹಿತ್ಯದ ಗುಣವಾಗಿರಬೇಕು, ಒಂದು ಮಹತ್ ಸಾಹಿತ್ಯ ಕೃತಿಯು ಯಾವಾಗಲೂ ಒಂದು ಮೌಲಿಕ ತರತಮ ಜ್ಞಾನವನ್ನು ಅವಲಂಬಿಸಿರುತ್ತದೆ.....

ಜೀವನವನ್ನು ಮೌಲಿಕ ದೃಷ್ಟಿಯಿಂದ ನೋಡುವವನಿಗೆ ಪ್ರತಿಯೊಂದು ವಸ್ತು, ಘಟನೆ, ಮಾನವ ವರ್ತನೆ, ನೋವು ನಲಿವು ಮತ್ತು ಭಾವಗಳಲ್ಲಿಯೂ ಒಂದಲ್ಲ ಒಂದು ಮೌಲ್ಯವು ಗೋಚರಿಸುತ್ತದೆ. ವಿಮೌಲ್ಯಗಳೆಂದು ನಾವು ತಿರಸ್ಕರಿಸುವ ಪಿಡುಗು, ಯುದ್ಧ, ಕೊಲೆ, ಕ್ರೌರ್ಯ ಮೊದಲಾದುವುಗಳಲ್ಲಿಯೂ ಯಾವುದೋ ಒಂದು ಮೌಲ್ಯವು ಕ್ಷೀಣವಾಗಿ ಇಣುಕಿ ಹಾಕುತ್ತಿರುತ್ತದೆ" (ಕಥೆ ಮತ್ತು ಕಥಾವಸ್ತು : ೧೧೪ – ೧೧೯). ಹೀಗೆ ಸಾಹಿತ್ಯವನ್ನು ಒಂದು 'ಅನನ್ಯ ಘಟಕ'ವೆಂದು ಪರಿಗಣಿಸಿ 'ಜೀವನಕ್ಕಾಗಿ ಕಲೆ' ಎಂಬ ನೆಲೆಯಿಂದಲೇ ವಿಶ್ಲೇಷಿಸಿದ್ದಾರೆ. ಸಮಕಾಲೀನ ನವ್ಯ ಪಂಥದ ಅನೇಕ ವಿಮರ್ಶಕರು ಈ ಧೋರಣೆಯನ್ನು ಕೈಬಿಟ್ಟಿದ್ದರಿಂದಾಗಿ ಭೈರಪ್ಪನವರಿಗೆ ಅಸಹನೆ ಇದೆ. ಅವರ ಕೃತಿಗಳಲ್ಲಿ ಈ ಅಂಶಗಳು ಸ್ಪಷ್ಟವಾಗಿ ಕಂಡು ಬರುತ್ತವೆ.

'ಸತ್ಯ ಮತ್ತು ಸೌಂದರ್ಯ' ಭೈರಪ್ಪನವರ ಪಿಎಚ್. ಡಿ. ಮಹಾಪ್ರಬಂಧ. 'ವಿಚಾರದ ಸೃಷ್ಟಿಯೇ ಸತ್ಯ, ಮತ್ತು ಕಲ್ಪನೆಯ ಸೃಷ್ಟಿಯೇ ಸೌಂದರ್ಯ' ಎಂಬ ಖಚಿತ ದೃಷ್ಟಿಕೋನದಿಂದ ಕೃತಿಯು ಆರಂಭವಾಗುತ್ತದೆ. ಈ ಎರಡು ಅಂಶಗಳ ಸ್ವರೂಪವನ್ನು ಅನುಕರಣ, ಸಾಧನ ಮತ್ತು ಸಾಂಗತ್ಯ ವಾದಗಳಿಂದ ಸ್ಪಷ್ಟಪಡಿಸುತ್ತಾರೆ : "ಅಸತ್ಯವಾದುದರಲ್ಲಿ ಅವಿಶ್ವಾಸ ಪಡುವುದು ವಿಚಾರದ ಮೂಲಗುಣ; ಅಂಥದನ್ನೂ ತಡೆಹಿಡಿದು ಆ ಕ್ಷಣದಲ್ಲಿ ವಿಶ್ವಾಸವನ್ನು ಕಾಪಾಡುವುದು ಕಲೆಯ ಧರ್ಮ. ಅಸತ್ಯದ ಅರಿವು ಆದರೂ ವಿಶ್ವಾಸ, ಪರಸ್ಪರ ವಿರೋಧಿಗಳಾದ ಈ ಎರಡು ಮನಃಸ್ಥಿತಿಗಳನ್ನೂ ಏಕಕಾಲದಲ್ಲಿ ಮೇಳೈಸುವುದು ಇಂದ್ರಿಯ ಪ್ರಜ್ಞೆಯ ಮಟ್ಟದಲ್ಲಿ ಸಾಧ್ಯವಾಗದ ಕೆಲಸ. ಇದನ್ನು ಸಾಧ್ಯಗೊಳಿಸುವುದೇ ಕಲೆಯ ವೈಶಿಷ್ಟ್ಯ" (ಸತ್ಯ ಸೌಂದರ್ಯ– ೩೧).

ವಿಚಾರ, ಅರಿವು, ವಿಶ್ವಾಸ ಈ ಮೂರೂ ಅಂಶಗಳೂ ಜೀವನದಲ್ಲಿ ಗಂಭೀರವಾದುವುಗಳು. ಸತ್ಯದ ಪಾತಳಿಯ ಮೇಲೆಯೇ ಜೀವನ ರೂಪುಗೊಂಡಿರುವುದರಿಂದ ಮನುಷ್ಯನ ಬದುಕು ಪ್ರಾಯೋಗಿಕವಾದುದಾಗಿದೆ. ಪ್ರಾಯೋಗಿಕತೆಯನ್ನು ಸ್ವರೂಪಗೊಳಿಸುವುದೇ ಸೌಂದರ್ಯ. ಇವೆರಡೂ ಜೀವನದ ಅವಿನಾಭಾವ ಅಂಶಗಳೆಂಬುದು ಲೇಖಕರ ಅಭಿಪ್ರಾಯ. ಆ ಕಾರಣ ತಮ್ಮ ಈ ಕೃತಿಯಲ್ಲಿ ಸತ್ಯ ಮತ್ತು ಸೌಂದರ್ಯವನ್ನು ಪ್ರಪಂಚದ ಎಲ್ಲಾ ತಾತ್ತ್ವಿಕ ದೃಷ್ಟಿಕೋನದ ಹಿನ್ನೆಲೆಯಿಂದ ಚರ್ಚಿಸುತ್ತಾರೆ. ಅಲ್ಲದೆ ತತ್ತ್ವಜ್ಞಾನ ಮತ್ತು ವಿಜ್ಞಾನದ ದೃಷ್ಟಿಕೋನವು ಒಂದೇ ಆಗಿರುವುದೆಂದು ಗುರುತಿಸಿದ್ದಾರೆ : "ತತ್ತ್ವಶಾಸ್ತ್ರದಲ್ಲಿ ಸತ್ಯವೆಂದರೆ ವೈಜ್ಞಾನಿಕ ಸತ್ಯ ಮಾತ್ರವೇ ಅಲ್ಲ; ಅದನ್ನೂ ಒಳಗೊಂಡು ಇತರ ಮೌಲ್ಯಗಳನ್ನೂ ಅನುಭವಗಳ ಸತ್ಯವನ್ನೂ ತತ್ತ್ವಶಾಸ್ತ್ರವು ಗುರುತಿಸುತ್ತದೆ. ಸೌಂದರ್ಯದ ಸತ್ಯವು ವೈಜ್ಞಾನಿಕ ಸತ್ಯಕ್ಕೆ ವಿರುದ್ಧವಾಗಿರುವ ಅಗತ್ಯವಿಲ್ಲ. ಈ ಎರಡು ಸತ್ಯಗಳಲ್ಲಿ ಒಂದು ಮತ್ತೊಂದರ ಕ್ಷೇತ್ರವನ್ನು ಪ್ರವೇಶಿಸಿ ತನ್ನ ಉಚ್ಚತೆಯನ್ನು ಸ್ಥಾಪಿಸ ಹೋರಟರೆ ಮಾತ್ರ ವಿರೋಧ ಹುಟ್ಟುತ್ತದೆ'' (ಸತ್ಯ ಮತ್ತು ಸೌಂದರ್ಯ : ೨೧೯, ೨೧೯). ಹೀಗೆ ಇವೆರಡರ ಸತ್ಯವನ್ನು ಒಂದೇ ಎಂದು ಹೇಳಿದ ಮೇಲೆ ಮುಂದೆ ವಿಜ್ಞಾನದ ವಸ್ತುವಿನ ಗಹನತೆ ಅದರ ವಸ್ತುವಿನ ಸ್ವರೂಪದ ದೃಷ್ಟಿಯಿಂದ ಸರಳವಾದುದು. ಆ ಕಾರಣ ಅದು ಬುದ್ಧಿಗೆ ದಕ್ಕುತ್ತದೆ. ಆದರೆ ತತ್ತ್ವಜ್ಞಾನದ ವಸ್ತುವು ಬುದ್ಧಿಗೆ ಸಿಕ್ಕುವಷ್ಟು ಸರಳವಾದುದು. ಆದುದರಿಂದ ವಿಜ್ಞಾನಿಗಳಲ್ಲಿ ಹೆಚ್ಚು ಅಂಶದ ಒಮ್ಮತವನ್ನು ಸಾಧಿಸಬಹುದು. ಆದರೆ ಬುದ್ಧಿಯ ಹಿಡಿತವನ್ನು ನಿರ್ವಿಣ್ಣಗೊಳಿಸುವ ತತ್ತ್ವಜ್ಞಾನದ ವಿಷಯ ಘನತೆಯಲ್ಲಿ ಬುದ್ಧಿಯು ತುಂಬಿಕೊಳ್ಳುವ ಸತ್ಯವು ಸರ್ವಜನ ಸಮ್ಮತವಾಗುವುದು ಕಷ್ಟಸಾಧ್ಯ''ವೆಂದು ಸ್ಪಷ್ಟವಾಗಿ ಹೇಳುತ್ತಾರೆ.

ತತ್ತ್ವಜ್ಞಾನ ಮತ್ತು ಸಾಹಿತ್ಯದ ಸ್ವರೂಪವನ್ನು ಕುರಿತು ಈ ಕೃತಿಯಲ್ಲೂ ಚರ್ಚಿಸುತ್ತಾರೆ. ತತ್ತ್ವಜ್ಞಾನವು ಸಾಹಿತ್ಯದಿಂದ ಹೊಸ ಬಗೆಯನ್ನು ಪಡೆಯುತ್ತದೆ : "ಸಾಹಿತ್ಯವು ತತ್ತ್ವಜ್ಞಾನದ ಸಮಸ್ಯೆಗಳ ಅಂತರಾರ್ಥವನ್ನು ಧರಿಸುವುದರಿಂದ ಅದು ತತ್ತ್ವಜ್ಞಾನದ ಸರಳೀಕೃತ ರೂಪವಲ್ಲ. ಸಾಹಿತ್ಯವು ಸಾಕ್ಷಾತ್ಕರಿಸಿರುವ ಸತ್ಯವು ಜೀವಂತವೂ, ಪ್ರಕಾಶಮಯವೂ, ಸ್ಪಷ್ಟವೂ ಆಗಿರುತ್ತದೆ. ತತ್ತ್ವಜ್ಞಾನವು ನಿರ್ದೇಶಿಸುವುದಕ್ಕಿಂತ ಅದು ಮೂರ್ತತರವಾದ ಸತ್ಯ. ಸಾಹಿತ್ಯವು ಅರ್ಥಕ್ಕಾಗಿ ತತ್ತ್ವಜ್ಞಾನವನ್ನು ಅವಲಂಬಿಸುತ್ತದೆಂದು ಇದರ ಅರ್ಥವಲ್ಲ. ಸಾಹಿತ್ಯವು ತನ್ನ ಯುಗದಲ್ಲಿ ಪ್ರಚಲಿತವಾಗಿರುವ ತತ್ತ್ವಜ್ಞಾನದಿಂದ ಪ್ರಭಾವಿತವಾಗಿರುತ್ತದೆ. ಅನೇಕ ವೇಳೆ ತತ್ತ್ವಜ್ಞಾನ ಸಹ ಸಮಕಾಲೀನ ಸಾಹಿತ್ಯದಿಂದ ಸ್ಪಷ್ಟ ಅಭಿವೃತ್ತಿಯನ್ನು ಪಡೆಯುತ್ತದೆ... ಒಂದು ಯುಗದ ಪ್ರಜ್ಞೆಯಲ್ಲಿರುವ ಅಭಿವೃತ್ತಿಯನ್ನು ಅಥವಾ ಸುಪ್ತಪ್ರವೃತ್ತಿಯನ್ನು, ಸಾಹಿತ್ಯವು ಕಲ್ಪನೆಯ ಮೂಲಕವೂ, ತತ್ತ್ವಜ್ಞಾನವು ವಿಚಾರದ ಮೂಲಕವೂ ಅಭಿವ್ಯಕ್ತಿಗೊಳಿಸುತ್ತವೆ'' (ಸತ್ಯ ಮತ್ತು ಸೌಂದರ್ಯ : ೨೩೧–೩೨). ಈ ದೃಷ್ಟಿಕೋನ ವಿಶಿಷ್ಟವಾದುದು. ತತ್ವಜ್ಞಾನ, ಸಾಹಿತ್ಯ, ವಿಜ್ಞಾನ ಈ ಮೂರು ಜ್ಞಾನಕ್ಷೇತ್ರಗಳನ್ನು ಒಂದು ನೆಲೆಯಿಂದ ಏಕತ್ರಗೊಳಿಸಿ, ಅಧ್ಯಯನಕ್ಕೆ ವಿಶಿಷ್ಟ ಗ್ರಾಸವನ್ನು ಒದಗಿಸುತ್ತದೆ. ಭೈರಪ್ಪನವರ ಈ ನಾಲ್ಕು ಸೃಜನೇತರ ಕೃತಿಗಳ ಬಗ್ಗೆ ಎಲ್ಲೂ ವಿಮರ್ಶೆ ಬಂದಿಲ್ಲ. ಈ ಕೃತಿಗಳು ಭೈರಪ್ಪನವರ ಕೃತಿಗಳ ಅಧ್ಯಯನಕ್ಕೂ ಒಂದು ಗಂಭೀರ ನೆಲೆಯನ್ನು ರೂಪಿಸುತ್ತವೆ. ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಅವರ ಈ ಕೃತಿಗಳು ಗಂಭೀರ ಕೊಡುಗೆಗಳೆನ್ನಲಡ್ಡಿಯಿಲ್ಲ.

ಕೊನೆಯದಾಗಿ ಒಂದು ಮಾತು. ಬೈರಪ್ಪನವರು ಸಮಕಾಲೀನ ಲೇಖಕರಲ್ಲಿ ಹೆಚ್ಚು ಮುಖ್ಯರಾದವರು. ಅವರಿಗೆ ಭಾರತಾದ್ಯಂತ ಅತ್ಯಂತ ಹೆಚ್ಚು ಓದುಗರಿದ್ದಾರೆ. ಅವರ ಕೃತಿಗಳು ವಿಮರ್ಶೆಗೆ ಒಂದು ಸವಾಲೇ ಆಗಿವೆ. ಕನ್ನಡದಲ್ಲಿ ಈವರೆವಿಗೂ ಬಹುತೇಕ ವಿಮರ್ಶಕರು ಇವರದು 'ರಂಜಿಸಿ ವಂಚಿಸುವ ಕಲೆ' ಎಂದು ಹೇಳಿ, ಇವರನ್ನು 'ಸಂಪ್ರದಾಯವಾದಿ'ಗಳೆಂದು ಹಣೆಪಟ್ಟಿ ಕಟ್ಟಿದ್ದಾರೆ. ಆದರೆ ಸುಲಭ ತೀರ್ಮಾನ ಸ್ತುತ್ಯವಲ್ಲ. ಸ್ವಾತಂತ್ರ್ಯೋತ್ತರ ಭಾರತದ ಸಾಮಾಜಿಕ ಸಂರಚನೆಯನ್ನು ನೀಡುವ ಇವರ ಕಾದಂಬರಿಗಳು ನಮ್ಮ ಸಮಾಜ– ಸಂಸ್ಕೃತಿಗಳ ಬಗ್ಗೆ ಅನೇಕ ಒಳನೋಟಗಳನ್ನು ನೀಡುತ್ತವೆ. ಇವರ ಕೃತಿಗಳಲ್ಲಿ ಬರುವ ಸಂಕೀರ್ಣ ಮನುಷ್ಯರೆಲ್ಲ ವಿದ್ಯಾವಂತರು. ಅನಕ್ಷರಸ್ಥರು ನಂಬಿ ಬದುಕುವ ಮೌಲ್ಯಗಳು ಇವರಿಗೆ ಸಹ್ಯವಾಗದೆ, ಆಧುನಿಕ ಮೌಲ್ಯಗಳನ್ನು ಅರಗಿಸಿಕೊಳ್ಳಲೂ ಆಗದೆ ಒದ್ದಾಡುತ್ತಿದ್ದಾರೆ. ಧರ್ಮವನ್ನು ಮತಧರ್ಮವಾಗಿ ಕಂಡ ಸತ್ಯನಾರಾಯಣನಾಗಲಿ, ಹೋರಾಟವನ್ನು ಮೇಲ್ಜಾತಿಯವರನ್ನು ತುಳಿಯುವ ಅಸ್ತ್ರವಾಗಿಸಿಕೊಂಡ ಮೋಹನದಾಸನಾಗಲಿ, ಧರ್ಮದ ಹೆಸರಿನಲ್ಲಿ ಸಂಪ್ರದಾಯವನ್ನು ಒಪ್ಪಿಕೊಂಡ ಶ್ರೋತ್ರಿಯವರಾಗಲಿ, ಪಾಶ್ಚಾತ್ಯ ವಿದ್ಯಾಭ್ಯಾಸ ಪಡೆದೂ ತಬ್ಬಲಿತನದಲ್ಲಿ ಕೊರಗುವ ಕಾಳಿಂಗನಾಗಲೀ–ಇವರೆಲ್ಲರ ಸಂಕೀರ್ಣತೆಗೆ ಕಾರಣಗಳು ದುರ್ಬಲ ವೈಚಾರಿಕತೆಯೋ? ಅಥವಾ ಅನನುಭವದ ಪರಿಣಾಮವೋ ಎಂಬುದನ್ನು ಗಮನಿಸಬೇಕು. ಕೃತಜ್ಞತೆ, ನಂಬಿಕೆ, ಪರಿಶೀಲನೆ ಮತ್ತು ಪ್ರಾಮಾಣಿಕತೆಯನ್ನು ಕಳೆದುಕೊಂಡಿರುವ ಸಮಕಾಲೀನ ಭಾರತೀಯ ಸಮಾಜದ ಗಮನ ಎರಡು ರೀತಿಯದು. ಒಂದು ಮತಧರ್ಮ ಪ್ರಣೀತ ಸಾಂಸ್ಕೃತಿಕ ನಂಬಿಕೆ, ಮತ್ತೊಂದು ವಿವೇಚನಾರಹಿತ ಪಾಶ್ಚಾತ್ಯ ಪ್ರಭಾವಗಳ ಸ್ವೀಕರಣ. ಬೈರಪ್ಪನವರ ಕೃತಿಗಳು ಈ ಎರಡನ್ನೂ ತೋರಿಸುತ್ತವೆ. ವಿಪುಲವಾದ ಸಾಂಸ್ಕೃತಿಕ ಮೌಲ್ಯಗಳಿದ್ದೂ ಒಗ್ಗಿಕೊಳ್ಳಲಾಗದ ನರಹರಿ ಕೇವಲ ಒಬ್ಬ ವ್ಯಕ್ತಿಯಲ್ಲ; ಸಮಕಾಲೀನ ದ್ವಂದ್ವತೆ, ಸಂಕೀರ್ಣತೆಯ ಪ್ರತೀಕ. ಹಾಗೆಯೇ 'ತಂತು'ವಿನ ರವೀಂದ್ರ, ಹೊನ್ನತ್ತಿ, ಅಣ್ಣಯ್ಯಗೌಡರು ಭ್ರಷ್ಟಗೊಂಡ ಸಾಮಾಜಿಕ ಮೌಲ್ಯಕ್ಕೆ ಬಲಿಪಶುಗಳು. ನಮ್ಮ ಸಮಾಜದ ಸ್ಥಿತಿಗತಿಯನ್ನು ನಿರ್ದಿಷ್ಟ ನೆಲೆಯಿಂದ 'ಕಂಡರಿಸು'ವುದರಿಂದಾಗಿ ಬೈರಪ್ಪನವರ ಕಾದಂಬರಿಗಳು ನಿರಾಶೆಯನ್ನು ಉಂಟು ಮಾಡುತ್ತವೆ. ಆದರೆ ಬೈರಪ್ಪನವರು ಆಶಾವಾದಿಗಳು, ಆದರ್ಶವಾದಿಗಳಲ್ಲವೆಂಬುದು ಅವರ ಕೃತಿಗಳ ಮುಖ್ಯ ಧ್ವನಿಯಾಗಿದೆ. ಸಮಕಾಲೀನ ಬದುಕಿನಲ್ಲಿ ತನ್ನನ್ನು ಯಾಂತ್ರೀಕರಣಗಳಿಸಿಕೊಂಡು ಕೇವಲ ಬದುಕುತ್ತಿರುವ ಮನುಷ್ಯ ಸುಖಿಸುತ್ತಿಲ್ಲ. ಸುಖಿಸುತ್ತಿಲ್ಲವೆಂದ ಮೇಲೆ 'ಆಶಾವಾದ' ಕೇವಲ ಮಿತ್ ಆದೀತು ಎಂಬುದು ಲೇಖಕರ ಗ್ರಹಿಕೆಯಾಗಿರಬೇಕು. ನಮ್ಮ ಸಂಸ್ಕೃತಿ, ಪರಂಪರೆಯ ಜೀವಂತ ಮೌಲ್ಯಗಳನ್ನು ನಮ್ಮ ವಿದ್ಯಾಭ್ಯಾಸ ಶ್ರುತಗೊಳಿಸಬೇಕು. ಹಾಗೆ ಮಾಡಿದರೆ ಮಾತ್ರ ಬದುಕು ಸಮೃದ್ಧಗೊಳ್ಳುತ್ತದೆ. ಇಲ್ಲದಿದ್ದರೆ ಈಗಾಗಲೇ ಲುಪ್ತವಾಗಿರುವ ಕೃತಜ್ಞತೆ, ಜವಾಬ್ದಾರಿ, ಪ್ರಾಮಾಣಿಕತೆ ಮತ್ತು ಮಾನವೀಯತೆಗಳಿಂದಾಗಿ ದುರಂತವನ್ನು ಪಡೆಯುತ್ತಾನೆಂಬುದು ಇವರ ಕೃತಿಗಳ ಮುಖ್ಯ ಧ್ವನಿಯೆನಿಸುತ್ತದೆ. ಈ ದೃಷ್ಟಿಕೋನದಿಂದ 'ಭಾರತೀಯ ಸಂಸ್ಕೃತಿ' ಕೇವಲ ಮತಧರ್ಮವಾಗದೆ, ವಿಶ್ವ ಸಂಸ್ಕೃತಿ ಮತ್ತು ಮಾನವೀಯ ಧರ್ಮವೆಂಬುದನ್ನು ಬಿಂಬಿಸುವತ್ತ ಅವರ ಕೃತಿಗಳು ತುಡಿಯುತ್ತಿವೆ.

# ಅನುಬಂಧ

## ಹೆಚ್ಚಿನ ಓದು

### ೧. ಭೈರಪ್ಪನವರ ಕೃತಿಗಳು

#### (ಅ) ಸೃಜನಶೀಲ

| | | | |
|---|---|---|---|
| ೧. | ಧರ್ಮಶ್ರೀ | ಸಾಹಿತ್ಯ ಭಂಡಾರ, ಬೆಂಗಳೂರು | ೧೯೬೧ |
| ೨. | ದೂರಸರಿದರು | –"– | ೧೯೬೨ |
| ೩. | ವಂಶವೃಕ್ಷ | –"– | ೧೯೬೫ |
| ೪. | ಮತದಾನ | –"– | ೧೯೬೫ |
| ೫. | ಜಲಪಾತ | –"– | ೧೯೬೭ |
| ೬. | ನಾಯಿನೆರಳು | –"– | ೧೯೬೮ |
| ೭. | ತಬ್ಬಲಿಯು ನೀನಾದೆ ಮಗನೆ | –"– | ೧೯೬೮ |
| ೮. | ಗೃಹಭಂಗ | –"– | ೧೯೭೦ |
| ೯. | ನಿರಾಕರಣ | –"– | ೧೯೭೧ |
| ೧೦. | ಗ್ರಹಣ | –"– | ೧೯೭೨ |
| ೧೧. | ದಾಟು | –"– | ೧೯೭೩ |
| ೧೨. | ಅನ್ವೇಷಣ | –"– | ೧೯೭೬ |
| ೧೩. | ಪರ್ವ | –"– | ೧೯೭೯ |
| ೧೪. | ನೆಲೆ | –"– | ೧೯೮೩ |
| ೧೫. | ಸಾಕ್ಷಿ | –"– | ೧೯೮೬ |
| ೧೬. | ಅಂಚು | –"– | ೧೯೯೦ |
| ೧೭. | ತಂತು | –"– | ೧೯೯೩ |
| ೧೮. | ಭೀಮಕಾಯ | (ತರಂಗ ವಾರಪತ್ರಿಕೆಯಲ್ಲಿ ಧಾರಾವಾಹಿ) | ೧೯೯೩ |
| ೧೯. | ಬೆಳಕು ಮೂಡಿತು | (ಅಪ್ರಕಟಿತ) | |
| ೨೦. | ಸಂಬಂಧ (ಕಥೆ) | ಕಸ್ತೂರಿ ವಸಂತ ಸಂಚಿಕೆ | ೧೯೬೯ |

### (ಅ) ಸೃಜನೇತರ

| | | | |
|---|---|---|---|
| ೧. | ಸತ್ಯ ಮತ್ತು ಸೌಂದರ್ಯ (ಪಿಎಚ್. ಡಿ ಮಹಾಪ್ರಬಂಧ) | ಸಾಹಿತ್ಯ ಭಂಡಾರ, ಹುಬ್ಬಳ್ಳಿ | ೧೯೬೬ |
| ೨. | ಸಾಹಿತ್ಯ ಮತ್ತು ಪ್ರತೀಕ | ಸಾಹಿತ್ಯ ಭಂಡಾರ, ಬೆಂಗಳೂರು | ೧೯೬೨ |
| ೩. | ಕಥೆ ಮತ್ತು ಕಥವಾಸ್ತು | –''– | ೧೯೬೯ |
| ೪. | ನಾನೇಕೆ ಬರೆಯುತ್ತೇನೆ | –''– | ೧೯೮೦ |

### ಅನ್ಯಭಾಷೆಗೆ ಅನುವಾದಗೊಂಡಿರುವ ಕಾದಂಬರಿಗಳು

| | | |
|---|---|---|
| ೧. | ವಂಶವೃಕ್ಷ | – ಮರಾಠಿ, ಹಿಂದಿ, ತೆಲುಗು, ಗುಜರಾಥಿ ಉರ್ದು ಮತ್ತು ಇಂಗ್ಲಿಷ್ |
| ೨. | ನಾಯಿನೆರಳು | – ಗುಜರಾಥಿ, ಹಿಂದಿ |
| ೩. | ತಬ್ಬಲಿಯು ನೀನಾದೆ ಮಗನೆ | – ಹಿಂದಿ |
| ೪. | ಗೃಹಭಂಗ | – ಭಾರತದ ಎಲ್ಲಾ ಹದಿನಾಲ್ಕು ಭಾಷೆಗಳು |
| ೫. | ನಿರಾಕರಣ | – ಹಿಂದಿ |
| ೬. | ದಾಟು | – ಭಾರತದ ಎಲ್ಲಾ ಹದಿನಾಲ್ಕು ಭಾಷೆಗಳು |
| ೭. | ಅನ್ವೇಷಣ | – ಹಿಂದಿ |
| ೮. | ಪರ್ವ | – ಮರಾಠಿ, ಹಿಂದಿ, ಇಂಗ್ಲಿಷ್ |
| ೯. | ನೆಲೆ | – ಹಿಂದಿ |
| ೧೦. | ಅಂಚು | – ಹಿಂದಿ, ಮರಾಠಿ |
| ೧೧. | ತಂತು | – ಹಿಂದಿ, ಮರಾಠಿ |
| ೧೨. | ಸಾಕ್ಷಿ | – ಹಿಂದಿ, ಇಂಗ್ಲಿಷ್ |
| ೧೩. | ನಾನೇಕೆ ಬರೆಯುತ್ತೇನೆ | – ಮರಾಠಿ |
| ೧೪. | ಸತ್ಯ ಮತ್ತು ಸೌಂದರ್ಯ | – ಇಂಗ್ಲಿಷ್ |

### ಭೈರಪ್ಪನವರಿಗೆ ಬಂದಿರುವ ಪ್ರಶಸ್ತಿಗಳು

| | | | |
|---|---|---|---|
| ೧. | ವಂಶವೃಕ್ಷ | – ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ | ೧೯೬೮ |
| ೨. | ದಾಟು | – ರಾಜ್ಯ ಹಾಗೂ ಕೇಂದ್ರ ಸಾಹಿತ್ಯ ಅಕಾಡೆಮಿ | ೧೯೭೪,೧೯೭೫ |

೩. ನೆಲೆ – ರಾಜ್ಯೋತ್ಸವ ಪ್ರಶಸ್ತಿ ೧೯೮೩

ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ

೪. ಸಾಕ್ಷಿ – ಕರ್ನಾಟಕ ಸಾಹಿತ್ಯ ಅಕಾಡೆಮಿ ಹಾಗೂ ಗ್ರಂಥಲೋಕ ೧೯೮೮

೫. ತಂತು – ಕರ್ನಾಟಕ ಸಾಹಿತ್ಯ ಅಕಾಡೆಮಿ, ಉತ್ತಮ ಸೃಜನಶೀಲಕೃತಿ ೧೯೯೩

೬. ಉತ್ತಮ ಚಲನ

ಚಿತ್ರ ಪ್ರಶಸ್ತಿ – ವಂಶವೃಕ್ಷ ಮತ್ತು ತಬ್ಬಲಿಯು ನೀನಾದೆ ಮಗನೆ

೧೯೭೨ ಮತ್ತು ೧೯೭೭

೭. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಸ್ಮಾರಕ ಪ್ರಶಸ್ತಿ ೧೯೯೫

ವಿಶೇಷ ಗೌರವ :

ಗೋವಾದಲ್ಲಿ ನಡೆದ ೬೭ನೇ ಅಖಿಲ ಭಾರತ ಮರಾಠಿ ಸಾಹಿತ್ಯ ಸಮ್ಮೇಳನದ ಉದ್ಘಾಟಕರಾಗಿದ್ದರು.

೨. (ಅ) ಭೈರಪ್ಪನವರ ಕೃತಿಗಳ ಬಗ್ಗೆ ಬಂದಿರುವ ವಿಮರ್ಶಾ ಗ್ರಂಥಗಳು :

೧. ಮಾಧವ ಕುಲಕರ್ಣಿ ಮತ್ತು ಮ. ಗೋವಿಂದರಾವ್ (ಸಂ)

'ಸಹಸ್ಪಂದನ', ಸಾಹಿತ್ಯ ಭಂಡಾರ, ಬೆಂಗಳೂರು ೧೯೭೮

೨. ವಿಜಯಾ (ಸಂ)

'ಪರ್ವ : ಒಂದು ಸಮೀಕ್ಷೆ', ಇಳಾಪ್ರಕಾಶನ, ಬೆಂಗಳೂರು ೧೯೮೩

೩. ಕೊಡಜ್ಜಿ ಕೆ. ವೆಂಕಟೇಶ್ (ಸಂ)

'ಸಾಮಾನ್ಯಜ್ಞಾನ' (ಭೈರಪ್ಪಾಭಿನಂದಾನ ಸಂಚಿಕೆ), ಬೆಂಗಳೂರು ೧೯೮೯

೪. ಡಾ. ಲೀಲಾವತಿ ತೋರಣಗಟ್ಟೆ

'ಭೈರಪ್ಪನವರ ಕಾದಂಬರಿಗಳು ಸ್ವರೂಪ' (ಪಿಎಚ್.ಡಿ. ಪ್ರಬಂಧ)

ವಿದ್ಯಾನಿಧಿ ಪ್ರಕಾಶನ ಗದಗ ೧೯೯೨

೫. ಕೊಂಡಜ್ಜಿ ಕೆ. ವೆಂಕಟೇಶ್ (ಸಂ)

'ಭೈರಪ್ಪಾಭಿನಂದನಾ', ಕೊಂಡಜ್ಜಿ ಪ್ರಕಾಶನ, ಬೆಂಗಳೂರು ೧೯೯೩.

(ಆ) ಬಿಡಿ ಬಿಡಿ ಲೇಖನಗಳು

೧. ಅನಂತಮೂರ್ತಿ. ಯು. ಆರ್ : 'ಸನ್ನಿವೇಶ', ಅಕ್ಷರ ಪ್ರಕಾಶನ, ಸಾಗರ, ''ಜನಪ್ರಿಯ ಕಲೆ ಮತ್ತು ಮಧ್ಯಮ ವರ್ಗ–ನಾಗರಹಾವು ಚಿತ್ರದ ವಿಶ್ಲೇಷಣೆ ಮತ್ತು ಭೈರಪ್ಪನವರ ಬಗ್ಗೆ'' ೧೯೭೪

೨. ಅಶೋಕ ಟಿ. ಪಿ. : 'ಕನ್ನಡ ವಿಮರ್ಶೆ', ವಿಶ್ವಕನ್ನಡ ಸಮ್ಮೇಳನ, ಬೆಂಗಳೂರು, "ಎಸ್. ಎಲ್. ಭೈರಪ್ಪನವರ ವಂಶವೃಕ್ಷ" ೧೯೮೩

೩. ಆಮೂರ, ಜಿ, ಎಸ್ : 'ಸಮಕಾಲೀನ ಕಥೆ – ಕಾದಂಬರಿ ಹೊಸ ಪ್ರಯೋಗಗಳು' ಕ. ಸಾ. ಪ., ಬೆಂಗಳೂರು, "ವಂಶವೃಕ್ಷ ಮತ್ತು ಮೌಲ್ಯವ್ಯವಸ್ಥೆ" ೧೯೮೬

೪. ಆಮೂರ. ಜಿ. ಎಸ್. : 'ಅರ್ಥಲೋಕ', ಸ್ನೇಹಪ್ರಕಾಶನ, ಬೆಂಗಳೂರು, "ಮೂರು ಹೊಸ ಕಾದಂಬರಿಗಳು ಸಾಕ್ಷಿ, ಬಂಡಾಯ, ಭೇದ". ೧೯೮೮

೫. ಕಣವಿ ಮಹಾದೇವ : 'ಕರ್ನಾಟಕ ಭಾರತಿ (ಸಂ. ೬, ಸಂಚಿಕೆ. ೨)', ಧಾರವಾಡ, "ಭೈರಪ್ಪನವರ ಕಾದಂಬರಿಗಳಲ್ಲಿ ಹಿಂದೂಪ್ರಜ್ಞೆ" ೧೯೭೩

೬. ಕೀರ್ತಿನಾಥ ಕುರ್ತಕೋಟಿ : 'ವಿಮರ್ಶೆಯ ವಿನಯ–ಕಾದಂಬರಿ', ಮನೋಹರ ಗ್ರಂಥಮಾಲೆ, ಧಾರವಾಡ, 'ಭೈರಪ್ಪನವರ ಕಾದಂಬರಿಗಳಲ್ಲಿ ಮೌಲ್ಯ ವಿಧಾನ" ೧೯೮೨

೭. ಕೃಷ್ಣಮೂರ್ತಿ. ಎಂ. ಜಿ.(ಕೃತಿ–ಸಂಸ್ಕೃತಿ), ಋಜುವಾತು ಪ್ರಕಾಶನ, ಮೈಸೂರು, "ದಾಟು ಒಂದು ಟಿಪ್ಪಣಿ " ೧೯೯೪

೮. ಗಿರಡ್ಡಿ ಗೋವಿದಂರಾಜ : 'ಕಾದಂಬರಿ – ವಸ್ತು ಮತ್ತು ತಂತ್ರ', ಸ್ನೇಹ ಪ್ರಕಾಶನ, ಬೆಂಗಳೂರು ; "ವಂಶವೃಕ್ಷ ವಿಮರ್ಶೆ" ೧೯೮೭

೯. ಗೋಪಾಲ್ ಟಿ. ಎಸ್. : 'ಸಾಹಿತ್ಯ ವಿಮರ್ಶೆ' ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು; "ವಂಶವೃಕ್ಷ ಸಮಸ್ಯೆ ಮತ್ತು ಧೋರಣೆ" ೧೯೭೭

೧೦. ಚಂದ್ರಶೇಕರ ತಾಳ್ಯ : ಸಂಕ್ರಮಣ – ೯೬ (ಸಂ ೭, ಸಂ. ೫) ಧಾರವಾಡ "ಪ್ರಗತಿಪರ ಧೋರಣೆ ಮತ್ತು ಭೈರಪ್ಪ" ೧೯೭೭

೧೧. ಜವರಯ್ಯ. ಮ. ನ. : ಸಂಕ್ರಮಣ – ೭೫ ( ಸಂ. ೧೩, ಸಂ. ೫) ಧಾರವಾಡ "ಕೆಲವು ಕನ್ನಡ ಕಾದಂಬರಿಕಾರರು ಕಂಡ ಹರಿಜನ ಸಮಾಜ" ೧೯೭೮

೧೨. ದಿವಾಕರ ಮಿಣಕನ ಗುರಿಕಿ : ಸಾಧನೆ (ಸಂ. ೮, ಸಂ. ೩) ಬೆಂಗಳೂರು ವಿ. ವಿ. "ತಬ್ಬಲಿಯು ನೀನಾದೆ ಮಗನೆ ಕಾದಂಬರಿಯಲ್ಲಿ ಧರ್ಮಪ್ರಜ್ಞೆ ಆಧುನಿಕ ವಿಚಾರಗಳ ಹುಸಿ ಸಂಘರ್ಷ" ೧೯೭೯

೧೩. ದೇವಯ್ಯ ಹರವೆ : 'ದಲಿತ ಸಾಹಿತ್ಯ ಮತ್ತು ಇತರ ಲೇಖನಗಳು', ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, "ದಾಟು–ಒಂದು ವಿವೇಚನೆ" ೧೯೯೧

೧೪. ದೇಸಾಯಿ ಬಿ. ಟಿ ; 'ಸಂಕ್ರಮಣ – ೨೨', ಧಾರವಾಡ 'ಜಲಪಾತ : ವಿಮರ್ಶೆ' ೧೯೬೮

೧೫. ನಾಗಭೂಷಣ ಡಿ. ಎಸ್ 'ಸಂಕ್ರಮಣ – ೭೬' (೧೩/೬) ಧಾರವಾಡ, "ದಾಟು– ಡಾ. ಭೈರಪ್ಪನವರ ಧಾರ್ಮಿಕ, ಸಮಾಜಿಕ ದೃಷ್ಟಿ" ೧೯೭೮

೧೬. ನಾಗಭೂಷಣಸ್ವಾಮಿ ಓ. ಎಲ್. : 'ಪುಸ್ತಕ ಮಾಹಿತಿ' (೧/೭) ಕನ್ನಡ ವಿಶ್ವವಿದ್ಯಾಲಯ, "ತಂತು – ಮೊದಲ ನೋಟ" ೧೯೯೩

೧೭. ನಾಗರಾಜನ್ ಎಸ್. : ಸಾಕ್ಷಿ – ೮, ಅಕ್ಷರ ಪ್ರಕಾಶನ, ಸಾಗರ, "ನಾಯಿನೆರಳು : ಕಾದಂಬರಿ" (ಅನು : ರಾಮದಾಸ)

೧೮. ನಾಯಕ ಹಾ. ಮಾ. (ಸಂ.) : 'ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ', ಮೈಸೂರು ವಿ.ವಿ. –"ಎಸ್. ಎಲ್. ಭೈರಪ್ಪ" – ಶಿವನಂಜಯ್ಯ ಎಂ. ೧೯೭೯

೧೯. ನಾಯಕ ಹಾ. ಮಾ. (ಸಂ.) : 'ಸ್ವಸ್ತಿ', ತ. ವೆಂ ಸ್ಮಾರಕ ಗ್ರಂಥಮಾಲೆ, ಮೈಸೂರು, "ವಂಶವೃಕ್ಷ" – ಆರ್ವಿಯಸ್ ಸುಂದರಂ ೧೯೮೩

೨೦. ನಾರಾಯಣ ಕೆ. ವಿ. : 'ಸಂಕೀರ್ಣ' (೧/೩) ಬೆಂಗಳೂರು, "ವಂಶವೃಕ್ಷ : ಆಶಯ ಮತ್ತು ಅಭಿವ್ಯಕ್ತಿ".

೨೧. ನಾರಾಯಣ ಕೆ. ವಿ. (ಸಂ.) : 'ಅನ್ಯಜ್ಞಾನ ಶಿಸ್ತುಗಳ ಮೂಲಕ ಕನ್ನಡ ಸಾಹಿತ್ಯ', ಕರ್ನಾಟಕ ಸಾಹಿತ್ಯ ಅಕಾಡೆಮಿ, ಕರ್ನಾಟಕ, "ಭೈರಪ್ಪನವರ ಸಾಹಿತ್ಯದಲ್ಲಿ ಐತಿಹಾಸಿಕತೆ ಮತ್ತು ಸಮಕಾಲೀನತೆ'– ಪಾಟೀಲ ಸಿ. ವಿ. ೧೯೯೨

೨೨. ನಿರಂಜನ : 'ಸಮನ್ವಯ', "ವಂಶವೃಕ್ಷದ ಬೇರು, ಟೊಂಗೆ, ಟಿಸಿಲು" ೧೯೬೭

೨೩. ಪುತ್ತೂರು ಎಸ್. ಎ. ನ. ಬಾ (೧/೮) "ಭೈರಪ್ಪನವರ ಕಾದಂಬರಿಗಳು : ಒಂದು ವಿಶ್ಲೇಷಣೆ" ೧೯೭೧

೨೪. ಬನ್ನಂಜೆ ಗೋವಿಂದಾಚಾರ್ಯ, 'ಸಂಕ್ರಮಣ – ೩೦', ಧಾರವಾಡ, "ವಂಶವಕ್ಷ" ವಿವೇಚನೆ" ೧೯೬೯

೨೫. ಬರಗೂರು ರಾಮಚಂದ್ರಪ್ಪ, ಸಿರಿಗನ್ನಡ ಪ್ರಕಾಶನ, ತುಮಕೂರು, "ಡಾ. ಎಸ್. ಎಲ್. ಭೈರಪ್ಪನವರ ವಂಶವೃಕ್ಷ : ಒಂದು ವಿವೇಚನೆ"

೨೬ ಬಸವರಾಜ ಸಬರದ 'ಸಾಹಿತ್ಯ ಸಂಗತಿ', ಪಲ್ಲವಿ ಪ್ರಕಾಶನ, ಗುಲಬರ್ಗಾ, "ಭೈರಪ್ಪನವರ ನೆಲೆ" ೧೯೯೪

೨೭. ಭಗವಾನ್. ಕೆ. ಎಸ್. ‘ಕುವೆಂಪು ಯುಗ’, ಸಹ್ಯಾದ್ರಿ ಪ್ರಕಾಶನ, ಮೈಸೂರು, [ದಾಟು ಕಾದಂಬರಿಯ ಬಗ್ಗೆ ತೌಲನಿಕವಾಗಿ ಪ್ರಸ್ತಾಪ] ೧೯೯೦

೨೮. ಭೈರವಮೂರ್ತಿ ಕೆ. ‘ಪ್ರತಿಫಲನ’, ವಿಜಯ ಪ್ರಕಾಶನ, ಮೈಸೂರು, “ವಂಶವೃಕ್ಷದಲ್ಲಿ ಶ್ರೀನಿವಾಸ ಶ್ರೋತ್ರಿ” ೧೯೭೩

೨೯. ಮಂಗಳಾ ಪ್ರಿಯದರ್ಶಿನಿ. ಡಿ. : ‘ಸಾಧನೆ (ಸಂ. ೭, ಸಂ. ೨)’, ಬೆಂಗಳೂರು, ವಿ. ವಿ. “ಕನ್ನಡ ಕಾದಂಬರಿಗಳಲ್ಲಿ ಹರಿಜನ ಸಮಸ್ಯೆ” (ದಾಟು ಬಗ್ಗೆ ಪ್ರಸ್ತಾಪ) ೧೯೭೮

೩೦. ರಂಗಾರೆಡ್ಡಿ ಕೋಡಿರಾಂಪುರ (ಸಂ) : ‘ಕಮಲಾಭಿನಂದನಾ’, ‘ಬೆಂಗಳೂರು, “ವಂಶವೃಕ್ಷ : ಒಂದು ಅಧ್ಯಯನ” – ಬರಗೂರು ರಾಮಚಂದ್ರಪ್ಪ ೧೯೮೫

೩೧. ರಾಮಚಂದ್ರನ್. ಸಿ. ಎನ್ : ‘ಸಂಕ್ರಮಣ (ಸಂ. ೨೯, ಸಂ. ೬)’ ಧಾರವಾಡ, “ಭೈರಪ್ಪನವರ ಕಾದಂಬರಿಗಳು ಮತ್ತು ಜನಪ್ರಿಯತೆ” ೧೯೯೪

೩೨. ರಾಮದಾಸ್ : ‘ಅಧ್ಯಯನ’, ಜ್ಯೋತಿಷ್ಮತಿ ಪ್ರಕಾಶನ, ಉಡುಪಿ, ೧ “ವಂಶವೃಕ್ಷ ಮತ್ತು ಸಂಸ್ಕಾರ” ೨. “ಗೃಹಭಂಗದಲ್ಲಿಯ ದುರಂತ” ೧೯೭೬

೩೩. ವಿಜಯಶಂಕರ್, ಎಸ್. ಆರ್ : ‘ಮನೋಗತ’, ಅಕ್ಷರ ಪ್ರಕಾಶನ, ಸಾಗರ, “ಪರ್ವದ ನಿರೂಪಣಾ ತಂತ್ರ” ೧೯೮೫

೩೪. ವಿದ್ಯಾಶಂಕರ್ ಎಸ್. ಆರ್. ; ‘ಸಾಧನೆ (ಸಂ. ೩, ಸಂ. ೩) ಬೆಂಗಳೂರು, ವಿ.ವಿ. “ಡಾ. ಎಸ್. ಎಲ್. ಭೈರಪ್ಪನವರ ದಾಟು : ಒಂದು ಸಮೀಕ್ಷೆ” ೧೯೭೮

೩೫. ವಿಠಲರಾವ್ ಟಿ. ಗಾಯಕ್ವಾಡ್ : ‘ತರಳಬಾಳು–೭೮’ ತರಳಬಾಳು, ಪ್ರಕಾಶನ, ಸಿರಿಗೆರೆ ; “ಸಂಕೀರ್ಣ ಮನಃಸ್ಥಿತಿಯ ಪ್ರತೀಕ : ನಿರಾಕರಣ” ೧೯೯೫

೩೬. ವ್ಯಾಸರಾಯ ಬಲ್ಲಾಳ : ‘ಅಂಕಣ’ (ಸಂ. ೯/೧೦)’, ಬೆಂಗಳೂರು, “ಶ್ರೀ ಭೈರಪ್ಪನವರ ‘ಸಾಕ್ಷಿ’ – ಕೆಲವು ಅನಿಸಿಕೆಗಳು ” ೧೯೮೭

೩೭. ಶಾಮಸುಂದರ ಬಿದರಕುಂದಿ : ‘ಕರ್ನಾಟಕ ಭಾರತಿ (ಸಂ. ೧೭, ಸಂ. ೪) ಕರ್ನಾಟಕ ವಿಶ್ವ ವಿದ್ಯಾನಿಲಯ ಧಾರವಾಡ, “೧೯೮೩ರ ಗಮನಾರ್ಹ ಕಾದಂಬರಿಗಳು ; ಸಮೀಕ್ಷೆ” (ನೆಲೆ) ೧೯೮೪

೩೮. ಶೇಷಗಿರಿರಾವ್ ಎಲ್. ಎಸ್. (ಪ್ರ ಸಂ.) : ‘ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ’, ಉದಯಭಾನು ಕಲಾ ಸಂಘ, ಬೆಂಗಳೂರು, “ಸಾಮಾಜಿಕ ಕಾದಂಬರಿಗಳು”: ವತ್ಸಲಾದೇವಿ ಸಿ. ೧೯೯೩

೪೯. ಶ್ರೀನಿವಾಸಮೂರ್ತಿ ಜಿ. : 'ಅಂಕಣ (ಸಂ. ೪, ಸಂ. ೨), ಬೆಂಗಳೂರು, "ಆರ್ಯ ಸಮಾಜದ ಬೈರಪ್ಪ" ೧೯೮೧

೫೦. ಶ್ರೀಮತಿ ಸರಸ್ವತಿ ಬೈರಪ್ಪ : 'ಮಯೂರ ಮಾಸಿಕ' ೨೭ ಸೆಪ್ಟೆಂಬರ್, "ಬೈರಪ್ಪ : ಬರಹವೇ ಬದುಕು" ೧೯೯೫

೫೧. ಸಿದ್ಧಲಿಂಗಯ್ಯ ಜಿ. ಎಸ್. : 'ಸಾಲು ದೀಪಗಳು', ಕ. ಸಾ. ಅಕಾಡೆಮಿ, ಬೆಂಗಳೂರು, "ಎಸ್. ಎಲ್. ಬೈರಪ್ಪ" – ಅಶ್ವತ್ಥನಾರಾಯಣ ಜಿ. ೧೯೯೦

೫೧. ಹೆಗ್ಗಡೆ ಜಿ. ಎಂ. : 'ಕರ್ನಾಟಕ ಭಾರತಿ '(ಸಂ. ೧೧, ಸಂ. ೨) ಕ.ವಿ.ವಿ. ಧಾರವಾಡ, "ಬೈರಪ್ಪನವರ ಕಾದಂಬರಿಗಳಲ್ಲಿ ಪ್ರೇಮದ ಪರಿಕಲ್ಪನೆ" ೧೯೭೮

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ನಮ್ಮ ನಾಡಿನಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ. ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟುಮಾಡಿವೆ. ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸ ಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ.

ನಾವು ನಮ್ಮ ನಮ್ಮಲ್ಲಿ ವಿಚಾರ ವಿನಿಮಯ ನಡೆಸಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪ ಎಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕವಾಗುವವೆಂಬ ನಂಬಿಕೆಯಿಂದ ಪುಸ್ತಿಕೆಗಳ ರೂಪದಲ್ಲಿ ಅವನ್ನು ಪ್ರಕಟಿಸಿ ನಿಮ್ಮ ಕೈಗಿಡುತ್ತಿದ್ದೇವೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು